CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಡಿಸೆಂಬರ್ ೧೬, ೨೦೦೪ (ಮಾರ್ಗಶಿರ ೨೫, ಶಕ ವರ್ಷ ೧೯೨೬) | ಸಂಚಿಕೆ ೫೦ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ನಂ.ಇಎಕ್ಸ್‌ಇ:3:ಡಿಟಿಸಿಆರ್‌ಎಂ: 277/2002-03, ದಿನಾಂಕ: 18ನೇ ಅಕ್ಟೋಬರ್, 2004**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು** |
|---|---|---|
| ಅಬಕಾರಿ ಉಪ ನಿರೀಕ್ಷಕರು,<br>ಸಂಚಾರಿದಳ, ಸೋಮವಾರಪೇಟೆ. | | ಲೋಕೇಶ್, ಬಾಳುಪೇಟೆ, ಸಕಲೇಶಪುರ,<br>ಹಾಸನ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 29.10.2002 ರಂದು ಬೆಳಿಗ್ಗೆ 8-30 ಗಂಟೆಯ ಸಮಯದಲ್ಲಿ ಕೊಡ್ಲಿಪೇಟೆಯ ಕಲ್ಲಹಳ್ಳಿ ಕಾಲೋನಿ ಪಕ್ಕದಲ್ಲಿ ಒಂದು ಕೆಂಪು ಬಣ್ಣದ ಮಾರುತಿ 800 ಕಾರು ನಂ. ಕೆಎ-03-ಎಂ-7042ರ ವಾಹನ ಹಾಸನ ಕಡೆಯಿಂದ ಬರುತ್ತಿದ್ದು, ಅನುಮಾನದ ಮೇಲೆ ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ಸೋಮವಾರಪೇಟೆ ರವರು ಅವರ ಸಿಬ್ಬಂದಿ ಸಮೇತ ಕರ್ತವ್ಯದ ಮೇಲಿದ್ದಾಗ ವಾಹನವನ್ನು ತಡೆದು ನಿಲ್ಲಿಸಿ ಕಾರಿನ ಒಳಗಡೆ ಪರಿಶೀಲಿಸಲಾಗಿ ಕಾರಿನಲ್ಲಿ 9 ರಟ್ಟಿನ ಪೆಟ್ಟಿಗೆಗಳಲ್ಲಿ 432x180 ಎಂ.ಎಲ್.ನ ರಾಜ ವಿಸ್ಕಿ ಮತ್ತು ಎರಡು ಪ್ಲಾಸ್ಟಿಕ್ ಚೀಲದಲ್ಲಿ ತಲಾ 100 ಎಂ.ಎಲ್.ನ 300 ಸಾರಾಯಿ ಪ್ಯಾಕೇಟುಗಳಿದ್ದು, ಇವುಗಳ ಬಗ್ಗೆ ರಹದಾರಿ ಪತ್ರ ಕೇಳಲಾಗಿ ಯಾವುದೂ ಇರುವುದಿಲ್ಲ ಎಂದು ತಿಳಿಸಿದ್ದರಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 34 ಹಾಗೂ 43(ಎ)ರ ಪ್ರಕಾರ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ವಾಹನವನ್ನು ವಶಪಡಿಸಿಕೊಂಡಿರುತ್ತಾರೆ. ಹಾಗೂ ಸದ್ರಿ ದಾಖಲೆಗಳ ಪ್ರತಿಗಳನ್ನು ಹಾಗೂ 43(ಎ) ಪ್ರಕಾರ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿ ವಾಹನ ಮತ್ತು ಸ್ವತ್ತುಗಳನ್ನು ತಮ್ಮ ವಶದಲ್ಲಿ ಇಟ್ಟುಕೊಳ್ಳಲು ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈ ಸ್ ರವರಿಂದ ಅನುಮತಿ ಪಡೆದು ಪ್ರಕರಣ ದಾಖಲೆ ಮತ್ತು ಸ್ವತ್ತುಗಳನ್ನು ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಸೋಮವಾರಪೇಟೆ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಶ್ರೀ ಲೋಕೇಶ್‌ರವರು ವಾಹನದ ಮಾಲೀಕರೆಂದು ಅವರ ಪರ ವಕೀಲರ ಮೂಲಕ ದಿನಾಂಕ: 22.11.2002ರಂದು ಅರ್ಜಿ ಸಲ್ಲಿಸಿರುತ್ತಾರೆ. ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ವಶಪಡಿಸುವ ಸಂದರ್ಭದಲ್ಲಿ ತೆಗೆದುಕೊಳ್ಳಲಾದ ಆರ್.ಸಿ. ಪುಸ್ತಕದಲ್ಲಿ ವಾಹನದ ಮಾಲೀಕರು ಶ್ರೀ ಲೋಕೇಶ್, ತಂದೆ ಲಿಂಗರಾಜು, ಕುಂದೂರು ಅಂಚೆ, ಆಲೂರು ತಾಲ್ಲೂಕು ಎಂದು ಬರೆದಿದ್ದು, ಸದರಿಯವರಿಗೆ ದಿನಾಂಕ: 23.10.03 ರಂದು 43(ಬಿ) ರ ಪ್ರಕಾರ ನೋಂದಣಿ ಅಂಚೆಯ ಮೂಲಕ ಕಾರಣ ಕೇಳಿ ನೋಟಿಸನ್ನು ನೀಡಲಾಗಿತ್ತು. ನೋಂದಣಿ ಅಂಚೆ ತಲುಪಿದ ಬಗ್ಗೆ ಸ್ವೀಕೃತಿ ಪತ್ರ ಈ ಪ್ರಾಧಿಕಾರಕ್ಕೆ ಬಂದಿರುತ್ತದೆ. ಆದರೆ ವಾಹನದ ಮಾಲೀಕರಾಗಲಿ, ಅವರ ಪರ ವಕೀಲರಾಗಲಿ ಸದರಿ ಕಾರಣ ಕೇಳಿಕೆ ನೋಟೀಸಿಗೆ ಉತ್ತರವನ್ನು ನೀಡಿರುವುದಿಲ್ಲ ಹಾಗೂ ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ಸಮಜಾಯಿಸಿಕೆಯನ್ನು ನೀಡಿರುವುದಿಲ್ಲ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸ್ವದೇಶಿ ಮದ್ಯ ಮತ್ತು ಸಾರಾಯಿ ಪ್ಯಾಕೇಟುಗಳನ್ನು ದಿನಾಂಕ: 10.03.2003ರಂದು ರಾಸಾಯನಿಕ ಪರೀಕ್ಷೆಗೆ ಕಳಿಸಲಾಗಿದ್ದು, ಅವರ ವರದಿ ದಿನಾಂಕ: 20.06.2003ರಂತೆ ಸದರಿ ಮದ್ಯ ಮತ್ತು ಸಾರಾಯಿಯು ಮದ್ಯವೆಂದು ಸಾಬೀತಾಗಿರುವುದರಿಂದ ವಾಹನದ ಮಾಲೀಕರು ಈ ಕೃತ್ಯ ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲೆ ವಿವರಿಸಲಾದ ಕಾರಣಗಳಿಂದ ಅಂದರೆ.

1. ಕಾರಣ ಕೇಳಿಕೆ ನೋಟಿಸಿಗೆ ಉತ್ತರ ನೀಡದೇ ಇರುವುದು.
2. ರಾಸಾಯನಿಕ ತಜ್ಞರ ವರದಿಯಂತೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ದ್ರವವು ಮದ್ಯ ಎಂದು ಸಾಬೀತಾಗಿರುವುದರಿಂದ ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ ವಾಹನ ಕೆಎ-03-ಎಂ-7042 ಹಾಗೂ ವಾಹನದ ಮಾಲೀಕರು ಅಬಕಾರಿ ಕಾಯ್ದೆ ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಹಾಗೂ ಇವರು ಈ ಕೃತ್ಯ ಎಸಗಿರುವ ಬಗ್ಗೆ ಯಾವುದೇ ನಿಸ್ಸಂದೇಹ ಇರುವುದಿಲ್ಲ.

ಈ ಪ್ರಕರಣದಲ್ಲಿ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಹಾಜರಾಗಲು ತಿಳಿಸುವ ಎಲ್ಲಾ ಪ್ರಯತ್ನವು ವಿಫಲವಾದ ನಂತರ ಕರ್ನಾಟಕ ರಾಜ್ಯದ ಮುದ್ರಣಾಲಯಕ್ಕೆ ದಿನಾಂಕ: 24.07.04 ರಂದು ಪತ್ರವನ್ನು ಬರೆದು ಈ ಪ್ರಕರಣದಲ್ಲಿ ಒಳಗೊಂಡ ಮಾಲೀಕರಿಗೆ ತಿಳಿಸುವಂತೆ ಪ್ರಕಟಣೆಯನ್ನು ಪ್ರಕಟಿಸಲು ಕೋರಲಾಗಿ ದಿನಾಂಕ: 19.08.04 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಯಿತು. ಪ್ರಕಟಿಸಲಾದ ಕರ್ನಾಟಕ ರಾಜ್ಯ ಪತ್ರವನ್ನು ಈ ಕಛೇರಿಯ ಪ್ರಕಟಣ ಫಲಕದಲ್ಲಿ ಹಾಗೂ ಕರ್ನಾಟಕದ ಇತರ ಎಲ್ಲಾ ಕಛೇರಿಗಳಿಗೆ ಪ್ರಕಟಣೆಯನ್ನು ಕಳುಹಿಸಿ ವ್ಯಪಬ್ಲಿಸಿಟಿ ಮಾಡಲು ಅಧಿಕಾರಿಗಳನ್ನು ಕೋರಲಾಗಿತ್ತು. ಪ್ರಕಟಿಸಿ ಒಂದು ತಿಂಗಳು ಕಳೆದರೂ ಸಂಬಂಧಪಟ್ಟವರು ಬಾರದ ಕಾರಣ ವಾಹನವು ಇಲಾಖೆಯ ವಶದಲ್ಲಿರುತ್ತದೆ.

ಸದರಿ ವಾಹನವನ್ನು ತೆರೆದ ಪ್ರದೇಶದಲ್ಲಿ ಮಳೆ, ಗಾಳಿ, ಬಿಸಿಲಿಗೆ ನಿಲ್ಲಿಸಿದ್ದು, ಕೊಡಗಿನಲ್ಲಿ ಮಳೆ ಜಾಸ್ತಿ ಇದ್ದು, ವಾಹನವು ತೀರಾ ತುಕ್ಕುಹಿಡಿದು ಹಾಳಾಗಿರುತ್ತದೆ. ಪ್ರಕೃತಿಯ ವಿಕೋಪದಿಂದ ವಾಹನದ ಬಿಡಿಭಾಗಗಳು ತುಕ್ಕುಹಿಡಿದು ಹಾಳಾಗಿದ್ದು, ಸರ್ಕಾರಕ್ಕೆ ಬರುವ ಅಲ್ಪ ಆದಾಯವು ಕೈತಪ್ಪುವ ಸಾಧ್ಯತೆ ಇರುವುದರಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವಾಗಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ: 3: ಡಿಟಿಸಿಆರ್‌ಎಂ:277:2002-03, ದಿನಾಂಕ: 18ನೇ ಅಕ್ಟೋಬರ್, 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ರ ಅಡಿಯಲ್ಲಿ ಸರ್ಕಾರದಿಂದ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಸೋಮವಾರಪೇಟೆ ಸಂಚಾರಿದಳದ ಅಬಕಾರಿ ಉಪ ನಿರೀಕ್ಷಕರ ಮೊ.ಸ. 13/2002-03, ದಿನಾಂಕ: 29.10.2002ರಲ್ಲಿ ಸ್ವಾಧೀನ ಪಡಿಸಿಕೊಂಡ ಮಾರುತಿ 800 ಕಾರು ನಂ.ಕೆಎ-03-ಎಂ-7042ರನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ)(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ಇಂದು ಅಂದರೆ ದಿನಾಂಕ: 18.10.04ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು, ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು, ಬಹಿರಂಗ ಹರಾಜು ಮೂಲಕ ವಿಲೇವಾರಿ, ಮಾಡಲಾಗುವುದು ಎಂದು ಆದೇಶಿಸಿರುತ್ತೇನೆ.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಪಿ.ಆರ್. 1668 ಕೊಡಗು ಜಿಲ್ಲೆ, ಮಡಿಕೇರಿ.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ರವರ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ**

**ಪ್ರಕಟಣೆ**

**ಸಂಖ್ಯೆ: ಇಎಕ್ಸ್‌ಇ:3: ಡಿಟಿಸಿಆರ್‌ಎಂ:3/2002-03, ದಿನಾಂಕ: 24ನೇ ನವೆಂಬರ್, 2004**

**ವಿಷಯ :** ಕೊಡಗು ಜಿಲ್ಲೆಯಲ್ಲಿನ ಅಬಕಾರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನಗಳ ವಿಲೇವಾರಿ ಬಗ್ಗೆ ಸರ್ಕಾರಿ ಪತ್ರದಲ್ಲಿ ಪ್ರಕಟಿಸುವ ಬಗ್ಗೆ.
**ಉಲ್ಲೇಖ:** ಮುಟ್ಟುಗೋಲು ಹಾಕಿಕೊಳ್ಳಬೇಕಾದ ಜೀಪ್ ಸಂಖ್ಯೆ: ಸಿ.ಎನ್.ಝಡ್-2774.

ಉಲ್ಲೇಖದಲ್ಲಿ ಹೇಳಲಾದ ವಾಹನವು ಕೊಡಗು ಜಿಲ್ಲೆಯಲ್ಲಿ ಸರ್ಕಾರದ ಪರವಾನಿಗೆ ಇಲ್ಲದೆ ಹಾಗೂ ಕಾನೂನಿಗೆ ವಿರೋಧವಾಗಿ ಅಕ್ರಮ ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡುತ್ತಿರುವಾಗ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ.

ಆರಕ್ಷಕ ಉಪ ನಿರೀಕ್ಷಕರು, ಶ್ರೀಮಂಗಲ ಪೊಲೀಸ್ ಠಾಣೆ, ಮೊಕದ್ದಮೆ ಸಂಖ್ಯೆ: 59/2002, ದಿನಾಂಕ: 08.07.2002.

ಸದರಿ ವಾಹನದ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರದಲ್ಲಿ ಅಬಕಾರಿ ಕಾಯಿದೆ 1965ರ ಕಲಂ 43(ಎ) ಅಡಿಯಲ್ಲಿ ವಿಚಾರಣೆ ನಡೆಸಲು ಸಂಬಂಧಪಟ್ಟ ವಾಹನದ ಮಾಲೀಕರುಗಳಿಗೆ ಅವಕಾಶ ನೀಡಲು ಹಲವಾರು ಬಾರಿ ಸಮನ್ಸ್ ನೀಡಲಾಯಿತು. ಸಮನ್ಸ್ ತಲುಪಿದರೂ ಸಹ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ.

ಆದುದರಿಂದ ಸದರಿ ವಾಹನದ ಮಾಲೀಕರು ಈ ಪ್ರಕಟಣೆ ಹೊರಡಿಸಿದ 15 ದಿವಸಗಳೊಳಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮೊಕದ್ದಮೆಯನ್ನು ನಡೆಸಲು ಸೂಚಿಸಿದೆ ಇಲ್ಲದ ಪಕ್ಷದಲ್ಲಿ ಯಾವುದೇ ಸೂಚನೆ ನೀಡದೆ ಅಬಕಾರಿ ಕಾಯಿದೆ 1965ರ ಕಲಂ 43(ಎ) ಪ್ರಕಾರ ನೇರವಾಗಿ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಮಹಮ್ಮದ್ ಇಲಿಯಾಸ್ ಅಹಮ್ಮದ್**
ಪಿ.ಆರ್. 1669 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪವಿಭಾಗ-2, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:170/2004, ದಿನಾಂಕ: 24ನೇ ನವೆಂಬರ್, 2004**

| **ಅರ್ಜಿದಾರರು:** | ವಿರುದ್ಧ | **ಪ್ರತಿವಾದಿಗಳು** |
|---|---|---|
| ಭಾಗ್ಯಮ್ಮ ಗಂಡ ಸುಭಾಸಹುಗಾರ<br>ವಾಸ-ಮೋರಟಗಿ, ತಾಲ್ಲೂಕು ಸಿಂಧಗಿ,<br>ಜಿಲ್ಲೆ ಬಿಜಾಪುರ. | 1) | ಬಸವರಾಜ, ತಂದೆ: ಹಿರಪ್ಪ ಚೌಕಿ<br>ವಾಸ: ಕೊಡಲಬಂಗರಗಾ, ತಾಲ್ಲೂಕು, ಆಳಂದ, ಜಿಲ್ಲೆ ಗುಲ್ಬರ್ಗಾ. |
| | 2) | ದಿಬ್ರಾಂಚ್ ಮ್ಯಾನೇಜರ್,<br>ದಿ ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ.,<br>ಎಸ್.ಎಸ್. ಫ್ರಂಟ್ ರೋಡ್, ಬಿಜಾಪುರ. |

**ಪ್ರಕಟಣೆ**

ಶ್ರೀಮತಿ ಭಾಗ್ಯಮ್ಮ ಗಂಡ ಸುಭಾಸ ಹುಗಾರ, ಇವರುಗಳಾದ ತಾವು ಮೃತ ಸುಭಾಸ ತಂದೆ ಭೀಮರಾಯ ಹುಗಾರ ಇವರ ಹೆಂಡತಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸುಭಾಸ ತಂದೆ ಭೀಮರಾಯ ಹುಗಾರ ಇವರು ಒಂದನೇ ಪ್ರತಿವಾದಿಗಳಾದ ಬಸವರಾಜ ತಂದೆ ಹಿರಪ್ಪ ಚೌಕಿ ಇವರ ಲಾರಿ ನಂ.ಕೆಎ-32:5501ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಪಿ.ಆರ್. 1672 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪವಿಭಾಗ-2, ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ:171/2004, ದಿನಾಂಕ: 25ನೇ ನವೆಂಬರ್, 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು**

1) ಭೀಮಾಬಾಯಿ ಹನುಮಂತ ಯತ್ನಾಳ್
ವಾಸ-ಕೊರವಾರ.
ತಾಲ್ಲೂಕು ಸಿಂಧಗಿ, ಜಿಲ್ಲೆ ಬಿಜಾಪುರ.
2) ಶೇಖರ ತಂದೆ ಹನಮಂತ ಯತ್ನಾಳ
ವಾಸ: ಕೊರವಾರ, ತಾಲ್ಲೂಕು ಸಿಂಧಗಿ,
ಜಿಲ್ಲೆ ಬಿಜಾಪುರ.

1) ಕಮಲಪ್ರಸಾದ ಶಕಲನಾರಾಯಣ ಶರ್ಮಾ ಬಿಲ್ಡಿಂಗ್ ಕಾಂಟ್ರೇಕ್ಟರ್.
ವಾಸ: ಶರ್ಮಾ ಇಂಡಸ್ಟ್ರೀಯಲ್ ಎಸ್ಟೇಟ್ ಆಫೀಸ್ ವಲ್ಲಭಟ್ಟ ರೋಡ್, ಗೋರೆಗಾಂವ ಈಸ್ಟ್ ಮುಂಬಾಯಿ-400063.
2) ಶರದ್‌ಪ್ರಸಾದ್ ಶಕಲ್‌ನಾರಾಯಣ ಶರ್ಮಾ
ವಾಸ: ಶರ್ಮಾ ಇಂಡಸ್ಟ್ರೀಯಲ್ ಎಸ್ಟೇಟ್ ಆಫೀಸ್ ವಲ್ಲಭಟ್ಟ ರೋಡ್, ಗೋರೆಗಾಂವ ಈಸ್ಟ್, ಮುಂಬಾಯಿ-400063.

**ಪ್ರಕಟಣೆ**

ಶ್ರೀಮತಿ (1) ಭೀಮಬಾಯಿ ಹನಮಂತ ಯತ್ನಾಳ್ (2) ಶೇಖರ ತಂದೆ ಹನಮಂತ ಯತ್ನಾಳ್, ಇವರುಗಳಾದ ತಾವು ಮೃತ ಪರತಪ್ಪ ಉರ್ಫ್ ಪ್ರಭು ಯತ್ನಾಳ್ ಇವರ ತಾಯಿ ಮತ್ತು ಸಹೋದರ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪರತಪ್ಪ ಉರ್ಫ್ ಪ್ರಭು ಯತ್ನಾಳ್ ಇವರು ಒಂದನೇ ಪ್ರತಿವಾದಿಗಳಾದ ಕಮಲಪ್ರಸಾದ್ ಶಕಲನಾರಾಯಣ ಶರ್ಮಾ (2) ಶರದ್‌ಪ್ರಸಾದ್ ಶಕಲನಾರಾಯಣ ಶರ್ಮಾ, ವಾಸ: ಶರ್ಮಾ ಇಂಡಸ್ಟ್ರೀಸ್ ಎಸ್ಟೇಟ್ ಆಫೀಸ್, ವಲಭಟ್ಟ ರೋಡ್, ಗೋರೆಗಾಂವ ಈಸ್ಟ್ ಬಾಂಬೆ-400063 ಇವರ ಮನೆ ಕಟ್ಟುವ ಕಾಂಟ್ರಾಕ್ಟ್ ಕೆಲಸದಲ್ಲಿ ಪ್ಲಾಸ್ಟರಿಂಗ್ ಲೇಬರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಪಿ.ಆರ್. 1673 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪವಿಭಾಗ-2, ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ:169/2004, ದಿನಾಂಕ: 24ನೇ ನವೆಂಬರ್, 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು**

1) ಭೀಮರಾಯ ತಂದೆ ಭುಮಣ್ಣ ಹುಗಾರ
ವಾಸ-ಮೋರಟಗಿ
ತಾಲ್ಲೂಕು ಸಿಂಧಗಿ, ಜಿಲ್ಲೆ ಬಿಜಾಪುರ.
2) ಅಂಬಾಬಾಯಿ ಗಂಡ ಭೀಮರಾಯ ಹುಗಾರ
ವಾಸ: ಮೋರಟಗಿ, ತಾಲ್ಲೂಕು ಸಿಂಧಗಿ,
ಜಿಲ್ಲೆ ಬಿಜಾಪುರ.

1) ಬಸವರಾಜ ತಂದೆ ಪಿರಪ್ಪ ಚೌಕಿ
ವಾಸ: ಕೊಡಲಬಂಗರಗಾ, ತಾಲ್ಲೂಕು ಅಳಂದ,
ಜಿಲ್ಲೆ ಗುಲ್ಬರ್ಗಾ.

**ಪ್ರಕಟಣೆ**

ಶ್ರೀ (1) ಭೀಮರಾಯ ತಂದೆ ಭುಮಣ್ಣ ಹುಗಾರ (2) ಅಂಬಾಬಾಯಿ ಗಂಡ ಭೀಮರಾಯ ಹುಗಾರ, ಇವರುಗಳಾದ ತಾವು ಮೃತ ಮಲ್ಲಪ್ಪ ತಂದೆ ಭೀಮರಾಯ ಹುಗಾರ ಇವರ ತಂದೆ-ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಲ್ಲಪ್ಪ ಬಿ. ಹುಗಾರ ಇವರು ಒಂದನೇ ಪ್ರತಿವಾದಿಗಳಾದ ಬಸವರಾಜ ತಂದೆ ಹಿರಪ್ಪ ಚೌಕೆ, ಇವರ ಲಾರಿ ನಂ.ಕೆಎ-32-5501ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ

ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್. 1674

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ-2, ಬೈಂದೂರ್ ವೆಲ್ ವೃತ್ತ, ಕಂಕನಾಡಿ ಮಂಗಳೂರು-2, ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್-35:2004:(ಎಫ್), ದಿನಾಂಕ: 20ನೇ ನವೆಂಬರ್, 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು**

1) ಶ್ರೀ ಕಣ್ಣಪ್ಪ, ಬಿನ್ ಕಣ್ಣಪ್ಪ
2) ಶ್ರೀಮತಿ ದೇವಕಿ, ಕೋಂ: ಕಣ್ಣಪ್ಪ
3) ಶ್ರೀ ಸತ್ಯನಾರಾಯಣ, ಬಿನ್: ಕಣ್ಣಪ್ಪ ಎಲ್ಲರ ವಾಸ: ಶಿರಗುಪ್ಪೆ ಗ್ರಾಮ, ಬಿ. ಮಂಚಲ್ ಅಂಚೆ, ಸಾಗರ ತಾ: ಶಿವಮೊಗ್ಗ-577431.
4) ಶ್ರೀ ಲೋಕನಾಥ, ಬಿನ್ ಕಣ್ಣಪ್ಪ, ಒ ಅಂಡ್ ಎಂ. ಡಿವಿಜನ್, ಮೆಸ್ಕಾಂ, ಬ್ರಹ್ಮಾವರ.

ಪ್ರತಿವಾದಿಗಳು:

1) ದ ಎಕ್ಸಿಕ್ಯೂಟಿವ್ ಇಂಜಿನಿಯರ್, ಮೆಸ್ಕಾಂ, ಒ ಅಂಡ್ ಎಂ. ಡಿವಿಜನ್, ಅತ್ತಾವರ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಕಣ್ಣಪ್ಪ ಮತ್ತು ಇತರರು ಇವರು ತಮ್ಮ ಮಗನಾದ ಶ್ರೀ ಭದ್ರೇಗೌಡ, ಗ್ಯಾಂಗ್‌ಮೆನ್ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 14-03-2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ-2,
ಮಂಗಳೂರು.

ಪಿ.ಆರ್. 1675

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ ಇವರ ನ್ಯಾಯಾಲಯ**

**ಸಂಖ್ಯೆ: ಎ2:71-ಎ:ಗುನ್ನೆ-92/04:ಸಿಆರ್-05/ 04-05, ದಿನಾಂಕ: 18ನೇ ನವೆಂಬರ್, 2004**

ದಾವಣಗೆರೆ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಅರಣ್ಯ ಉತ್ಪನ್ನಗಳ ಕಳ್ಳ ಸಾಗಣಿಕೆಯಲ್ಲಿ ತೊಡಗಿದ್ದ ವಾಹನವನ್ನು ದಾವಣಗೆರೆ ಜಿಲ್ಲೆಯ ಹೊನ್ನಾಳಿ ಪೊಲೀಸ್ ಠಾಣೆಯ ಸಿಬ್ಬಂದಿ ವರ್ಗದವರು ಸರ್ಕಾರದ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನದ ವಿವರ ಈ ಕೆಳಕಂಡಂತಿರುತ್ತದೆ.

| ಕ್ರಮ ಸಂಖ್ಯೆ | ವಾಹನದ ವಿವರ | ಪೊಲೀಸ್ ಪ್ರಕರಣ ಸಂಖ್ಯೆ | ವಾಹನದ ಸಂಖ್ಯೆ | ಎಂಜಿನ್ ಸಂಖ್ಯೆ | ಚಾಸ್ಸಿಸ್ ಸಂಖ್ಯೆ |
|---|---|---|---|---|---|
| 1. | ಮಹೀಂದ್ರಾ ಜೀಪ್ | 92/2004 | ಕೆಎ-02-ಎಂ-32 | SM-10117 | MM-540 DP-4DM-10117 |

ಮೇಲೆ ತೋರಿಸಿರುವ ವಾಹನದ ಬಗ್ಗೆ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನದ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ, ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲೆಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರು ಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲಿನ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಬಿ. ಗೋಪಾಲನಾಯ್ಕ್**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್. 1676

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**
**ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ**
**ಪ್ರಕಟಣೆ**
**ಸಂಖ್ಯೆ: ಎಇಇ(ಕ)/ಟಿ-142/ 3310-12, ದಿನಾಂಕ: 26ನೇ ಅಕ್ಟೋಬರ್, 2004**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28 ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಕೆಳಕಂಡಂತಿವೆ:

| | |
|---|---|
| **ಕೆಲಸದ ಹೆಸರು :** | 66 ಕೆವಿ ಹಾಸನ-ಹೊಳೆನರಸೀಪುರ ವಿದ್ಯುತ್ ಮಾರ್ಗದಿಂದ ಸಂಪರ್ಕ ಜೋಡಣೆ ಮಾಡಿ ಉದ್ದೇಶಿತ ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಹತ್ತಿರವಿರುವ ಸೋಮನಹಳ್ಳಿ 66/11 ಕೆವಿ ವಿದ್ಯುತ್ ವಿತರಣಾ ಕೇಂದ್ರದ ನಿರ್ಮಾಣದ ಸಲುವಾಗಿ ವಿದ್ಯುತ್‌ಮಾರ್ಗ ನಿರ್ಮಾಣ. |
| **ಉದ್ದೇಶ :** | ಹಾಸನ ಜಿಲ್ಲೆಯ ಸೋಮನಹಳ್ಳಿ ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಲು ಹಾಗೂ ಸ್ಥಿರವಾದ ವಿದ್ಯುತ್ ಪೂರೈಸುವ ಸಲುವಾಗಿ. |
| **ಹಾದು ಹೋಗುವ ಪ್ರದೇಶ :** | ಸೋಮನಹಳ್ಳಿ, ಸೋಮನಹಳ್ಳಿಕೊಪ್ಪಲು, ಗುಡ್ಡೇನಹಳ್ಳಿ ವ್ಯಾಪ್ತಿಯ ಪ್ರದೇಶ. |
| **ಅಂದಾಜು ವೆಚ್ಚ :** | ರೂ. 68.86 ಲಕ್ಷಗಳು. |

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985(13)ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕನಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯಪಾಲಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ/ಹಾಸನ.

ಪಿಡಿ-82

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಬಳ್ಳಾರಿ ಉಪವಿಭಾಗ-1, ಬಳ್ಳಾರಿ ಜಿಲ್ಲೆ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ: ಸಿಆರ್: 261-04, ದಿನಾಂಕ: 27ನೇ ನವೆಂಬರ್, 2004**

| **ಅರ್ಜಿದಾರರು:** | ವಿರುದ್ಧ | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ಹುಲಿಗೆಮ್ಮ ಕೋಂ,<br>ಲೇಟ್ ಮಲ್ಲಪ್ಪ, ವಯಸ್ಸು:45,<br>ವಾಸ: ವೆಂಕಟಪುರ ಗ್ರಾಮ,<br>ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ. | | 1) ಶ್ರೀ ಮಲ್ಲಪ್ಪ, ತಂದೆ: ಗಾಳೇಪ್ಪ, ಟ್ರಾಕ್ಟರ್ ಮಾಲೀಕರು,<br>ನಂ.ಕೆಎ-35-ಟಿ-781-782,<br>ವಾಸ:ನಂ.76, ವೆಂಕಟಪುರ ಗ್ರಾಮ,<br>ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ.<br>2) ದಿ ಡಿವಿಜನಲ್ ಮ್ಯಾನೇಜರ್,<br>ಮೆ: ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಬಳ್ಳಾರಿ. |

**ಪ್ರಕಟಣೆ**

ಶ್ರೀಮತಿ ಹುಲಿಗೆಮ್ಮ ಕೋಂ, ಲೇಟ್ ಮಲ್ಲಪ್ಪ, ಆದ ತಾವು ಮೃತ ಕೆ. ಮಂಜುನಾಥ (ಮೃತ) ಇವರ ಮಗ ಮತ್ತು ಅವಲಂಬಿತರು ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೆ. ಮಂಜುನಾಥ 1ನೇ ಪ್ರತಿವಾದಿಗಳಾದ ಕೆ. ಮಲ್ಲಪ್ಪ, ಇವರ ಟ್ರಾಕ್ಟರ್‌ನಲ್ಲಿ ದಿನಾಂಕ: 26.03.04ರಂದು ಕೂಲಿಯಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವ್‌ನಾಯ್ಕ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ಬಳ್ಳಾರಿ ಉಪವಿಭಾಗ-1, ಬಳ್ಳಾರಿ.

ಪಿ.ಆರ್. 1677

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಬಳ್ಳಾರಿ ಉಪವಿಭಾಗ-1, ಬಳ್ಳಾರಿ ಜಿಲ್ಲೆ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ: ಸಿಆರ್: 150-04, ದಿನಾಂಕ: 27ನೇ ನವೆಂಬರ್, 2004**

| **ಅರ್ಜಿದಾರರು:** | ವಿರುದ್ಧ | **ಪ್ರತಿವಾದಿಗಳು** |
|---|---|---|
| 1) ಶ್ರೀ ತ್ರೀಷಪಾಲ್,<br>ತಂದೆ:ಮೌಲ್‌ಸಿಂಗ್, ವಯಸ್ಸು:45,<br>ವಾಸ:ಬವಾಡಿ ಮುಜಾಷರ ನಗರ,<br>ರಾಜ್ಯ: ಉತ್ತರಪ್ರದೇಶ,<br>ಹಾಲಿವಾಸ:ಹೊಸಪೇಟೆ ಬಳ್ಳಾರಿ ಜಿಲ್ಲೆ. | | 1) ದಿ ಬ್ರಾಂಚ್ ಮ್ಯಾನೇಜರ್,<br>ಪಿ.ಪಿ. ಟ್ರಾನ್ಸ್‌ಪೋರ್ಟ್ ಇಂಡಿಯಾ, ಹೊಸಪೇಟೆ, ಬಳ್ಳಾರಿ ಮೇನ್ ರೋಡ್, ತೋರಣಗಲ್ಲು ರೈಲ್ವೆ ಸ್ಟೇಷನ್, ಕುರೆಕುಪ್ಪ, ಗ್ರಾಮ:<br>ಸಂಡೂರು(ತಾ) ಬಳ್ಳಾರಿ (ಜಿ). |

**ಪ್ರಕಟಣೆ**

ಶ್ರೀ ತ್ರೀಷಪಾಲ್, ತಂದೆ:ಮೌಲ್‌ಸಿಂಗ್, ಇವರಾದ ತಾವು ಮೃತ ಸಂಜೀವ ಮಾಲೀಕ್ ಇವರ ತಂದೆ ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಸಂಜೀವ ಮಾಲೀಕ್ ರವರು ಪ್ರತಿವಾದಿಗಳಾದ ದಿ ಬ್ರಾಂಚ್ ಮ್ಯಾನೇಜರ್ ಪಿಪಿ ಟ್ರಾನ್ಸ್‌ಪೋರ್ಟ್ ಇಂಡಿಯಾ ಹೊಸಪೇಟೆ, ಇವರಲ್ಲಿ ಗುಮಾಸ್ತನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ದಿನಾಂಕ: 23.08.2001ರಂದು ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವ್‌ನಾಯ್ಕ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ಬಳ್ಳಾರಿ ಉಪವಿಭಾಗ-1, ಬಳ್ಳಾರಿ.

ಪಿ.ಆರ್. 1678

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಬಳ್ಳಾರಿ ಉಪವಿಭಾಗ-1, ಬಳ್ಳಾರಿ ಜಿಲ್ಲೆ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ: ಸಿಆರ್: 219-04, ದಿನಾಂಕ: 27ನೇ ನವೆಂಬರ್, 2004**

**ಅರ್ಜಿದಾರರು:**

1) ಶ್ರೀಮತಿ ವಿ. ಸುಂಕಮ್ಮ, ಕೋಂ, ಲೇಟ್ ವಿ. ಮಹೇಶ್, ಅಲಿಯಾಸ್ ವಿ. ಮಾರೇಶ್, 22 ವರ್ಷ.
2) ವಿ. ವೆಂಕಟೇಶ್, ತಂದೆ: ವಿ. ಮಹೇಶ್, 5 ವರ್ಷ.
3) ಚಿ: ವಿ. ಉಪೇಂದ್ರ, ತಂದೆ: ಲೇಟ್ ವಿ. ಮಹೇಶ್, 3 ವರ್ಷ.
4) ವಿ. ಸುಂಕಪ್ಪ, ತಂದೆ, ವಿ. ಲಂಕಣ್ಣ, 58 ವರ್ಷ.
5) ಶ್ರೀಮತಿ ವಿ. ಲಕ್ಷ್ಮಮ್ಮ ಗಂಡ: ವಿ. ಸುಂಕಪ್ಪ, 52 ವರ್ಷ, ಎಲ್ಲರು ವಾಸ: ವಾರ್ಡ್‌ನಂ. 26, ಕಟ್ಟೆಗುಡ್ಡ, ರೇಣುಕಮ್ಮ ದೇವಸ್ಥಾನ ಹತ್ತಿರ, ಕೆ.ಸಿ. ರಸ್ತೆ, ಬಳ್ಳಾರಿ.

**ವಿರುದ್ಧ**

**ಪ್ರತಿವಾದಿಗಳು**

1) ಮೆ: ಪ್ರಕಾಶ್ ಇಂಡಸ್ಟ್ರೀಸ್, ಮ್ಯಾನೇಜಿಂಗ್ ಪಾರ್ಟನರ್, ಎಂ. ಸುಧಾಕರ್, ತಂದೆ: ಎಂ. ಬಾಲಸ್ವಾಮಿ, ಪ್ಲಾಟ್ ನಂ.23-24, ಕೆ.ಐ.ಡಿ.ಬಿ. ಇಂಡಸ್ಟ್ರೀಯಲ್, ಏರಿಯ, ಮುಂಡ್ರಿಗಿ, 2ನೇ ಹಂತ, ಬಳ್ಳಾರಿ.
2) ದಿ ಬ್ರಾಂಚ್ ಮ್ಯಾನೇಜರ್, ಮೆ: ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಈಡಿಗ್ ಕಾಂಪ್ಲೆಕ್ಸ್, ಬಳ್ಳಾರಿ.

**ಪ್ರಕಟಣೆ**

ಶ್ರೀಮತಿ ಸುಂಕಮ್ಮ ಮತ್ತು ಇತರರುಗಳಾದ ಮೃತ ವಿ. ಮಹೇಶ್, ಅಲಿಯಾಸ್ ಮಾರೇಶ್, ಇವರ ಗಂಡ ಮತ್ತು ಮಗ ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ವಿ. ಮಹೇಶ್ ಅಲಿಯಾಸ್ ಮಾರೇಶ್ ರವರು 1ನೇ ಪ್ರತಿವಾದಿಗಳಲ್ಲಿ ಕಾರ್ಮಿಕನಾಗಿ ದಿನಾಂಕ: 20.03.2004ರಂದು ಕಾರ್ಮಿಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವ್‌ನಾಯ್ಕ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ಬಳ್ಳಾರಿ ಉಪವಿಭಾಗ-1, ಬಳ್ಳಾರಿ.

ಪಿ.ಆರ್. 1679

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ದಕ್ಷಿಣ ಕನ್ನಡ ಉಪವಿಭಾಗ, ಬೈಂದೂರ್‌ವೆಲ್, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಅಧಿಸೂಚನೆ**

**ಸಂಖ್ಯೆ: ಡಬ್ಲ್ಯೂ.ಸಿ.ಎಂ.ಸಿ.ಆರ್:43/ 04 ಎಫ್, ದಿನಾಂಕ: 29ನೇ ನವೆಂಬರ್, 2004**

**ಅರ್ಜಿದಾರರು:**

1) ಶ್ರೀ ಬಾಬು ಬಿ. ಹೆಗ್ಡೆ ಬಿನ್ ದಿ ಗಂಗಯ್ಯ ಹೆಗ್ಡೆ ನಿತ್ಯಾನಂದ ನಿವಾಸ, ಕೋಟೆಬಾಗಿಲು, ಮೂಡಬಿದ್ರೆ, ಮಂಗಳೂರು.
2) ಶ್ರೀಮತಿ ಸುಂದರಿ ಹೆಗ್ಡೆ ಕೋಂ ಬಾಬು ಜಿ. ಹೆಗ್ಡೆ ನಿತ್ಯಾನಂದ ನಿವಾಸ, ಕೋಟೆಬಾಗಿಲು, ಮೂಡಬಿದ್ರೆ.

**ವಿರುದ್ಧ**

**ಪ್ರತಿವಾದಿಗಳು**

1) ಶ್ರೀ ವಿಕ್ರಂ ಕೊಲ್ಕೆ, 223, 8ನೇಕ್ರಾಸ್, 1ನೇ ಎನ್ ಬ್ಲಾಕ್, ರಾಜಾಜಿನಗರ, ಬೆಂಗಳೂರು-560010.
2) ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂ.ಲಿ., ನಂ.25 ಶಂಕರನಾರಾಯಣ ಬಿಲ್ಡಿಂಗ್ 1ನೇ ಮಹಡಿ, ಎಂ.ಜಿ. ರೋಡ್, ಬೆಂಗಳೂರು-560001.

ಅರ್ಜಿದಾರನಾದ: ಅರ್ಜಿದಾರಳಾದ ಶ್ರೀಮತಿ: ಶ್ರೀ ಬಾಬು ಬಿ. ಹೆಗ್ಡೆ ಮತ್ತು ಅವರ ಪತ್ನಿ ಇವರು ತಮ್ಮ ಗಂಡನಾದ: ಮಗನಾದ ಶ್ರೀ ಉದಯ ಹೆಗ್ಡೆ ಇವರು 1ನೇ ಪ್ರತಿವಾದಿಗಳಲ್ಲಿ ಶ್ರೀ ವಿಕ್ರಂ ಕೊಲ್ಕೆ ಇವರ ವಾಹನದಲ್ಲಿ ಚಾಲಕ ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 15.06.2004ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವು ಕ್ಲೇಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ನಷ್ಟಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ
ಅಧಿಕಾರಿ, ದಕ್ಷಿಣ ಕನ್ನಡ ಉಪವಿಭಾಗ, ಮಂಗಳೂರು.

ಪಿ.ಆರ್. 1680

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**
**ಪ್ರಕರಣ ಸಂಖ್ಯೆ: ಕಾಪಕ:ಕಸ-68:04, ದಿನಾಂಕ: 29ನೇ ನವೆಂಬರ್, 2004**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಭೀಮಣಿಬಾಯಿ ಕೋಂ<br>ದಿ: ಸಕ್ರಾನಾಯಕ ತಂಗಲಿ ತಂಡ,<br>ತಂಗಲಿ ಅಂಚೆ, ಕಡೂರು ತಾಲ್ಲೂಕು. | | 1) ಎಕ್ಸಿಕ್ಯೂಟಿವ್ ಇಂಜಿನಿಯರ್<br>ಟಿ ಎಲ್ ಅಂಡ್ ಎಸ್ಎಸ್ಕೆಪಿಟಿಸಿಎಲ್, ಗಾಂಧೀನಗರ,<br>ಶಿವಮೊಗ್ಗ. |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ದಿ: ಸಕ್ರಾನಾಯಕ ರವರು ಪ್ರತಿವಾದಿಯವರಲ್ಲಿ 2ನೇ ದರ್ಜೆ ಮೆಕಾನಿಕ್ ಆಗಿ ಕೆಲಸದ ಮೇಲೆ ಇದ್ದಾಗ ದಿನಾಂಕ: 28.02.2004ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 22.11.2004ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟಪರಿಹಾರಕ್ಕೆ ಆಯುಕ್ತರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 1681

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-30/ಎಫ್ಸಿ/2004/433, ದಿನಾಂಕ: 30ನೇ ನವೆಂಬರ್, 2004**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀ ನರಸಿಂಹ ಕಾಂಚನ್,<br>ಕೊರಗಾ ಸಾಹುಕಾರ ರವರ ಮಗ<br>2) ಶ್ರೀಮತಿ ಕುಸುಮ ನರಸಿಂಹ ಕಾಂಚನರವರ ಪತ್ನಿ,<br>ವಾಸ: ಚತ್ರುಬೆಟ್ಟು, ಬಿಜಾಡಿ ಗ್ರಾಮ, ಕೋಟೇಶ್ವರ,<br>ಕುಂದಾಪುರ. | | 1) ಶ್ರೀ ಅಬ್ದುಲ್ ರಜಾಕ್,<br>ಶೇಖ್ ಉಮ್ಮರ್ ಸಾಹೇಬ್‌ರವರ ಮಗ,<br>ಹೆಚ್.ಜಿ. ಹೌಸ್, ಅಮೃತೇಶ್ವರಿ ದೇವಸ್ಥಾನ ಹತ್ತಿರ,<br>ಗಿಳಿಯಾರು ಗ್ರಾಮ, ಕೋಟ.<br>2) ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಪ್ರಭು ಬಿಲ್ಡಿಂಗ್,<br>ಮುನ್ಸಿಪಲ್ ರಸ್ತೆ, ಕುಂದಾಪುರ. |

**ಅಧಿಸೂಚನೆ**

ಅರ್ಜಿದಾರರಾದ: ಶ್ರೀ ನರಸಿಂಹ ಕಾಂಚನ್ ಇವರು ತಮ್ಮ ಮಗನಾದ ಶ್ರೀ ವಾಸು ಎನ್. ಕಾಂಚನ್ ಇವರು ಪ್ರತಿವಾದಿಗಳಾದ ಶ್ರೀ ಅಬ್ದುಲ್ ರಜಾಕ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 11.08.2004ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ, ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಹೆಚ್.ಕೆ. ಷಣ್ಮುಗಪ್ಪ**
ಕಾರ್ಮಿಕನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 1682

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ, ಇವರ ನ್ಯಾಯಾಲಯದಲ್ಲಿ,**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-29/ಎಫ್‌ಸಿ/2004/438, ದಿನಾಂಕ: 30ನೇ ನವೆಂಬರ್, 2004**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಶ್ರೀ ಸಂಜೀವ್ ಕುಂದರ್<br>ಮಗ: ಅರ್ಮ ಮರಕಳಿ<br>2) ಶ್ರೀಮತಿ ಶಾರದ, ಕೋಂ: ಸಂಜೀವ ಕುಂದರ್,<br>ವಾಸ: ಚಿತ್ರಬೆಟ್ಟು, ಬೀಜಾಡಿ ಗ್ರಾಮ,<br>ಕೋಟೇಶ್ವರ, ಕುಂದಾಪುರ. | | 1) ಶ್ರೀ ಅಬ್ದುಲ್ ರಝಾಕ್, ಬಿನ್<br>ಶೇಖ್ ಉಮ್ಮರ್ ಸಾಹೇಬ್,<br>ಹೆಚ್.ಜಿ. ಹೌಸ್, ಅಮ್ಮತೇಶ್ವರಿ ದೇವಸ್ಥಾನ ಹತ್ತಿರ,<br>ಗಿಳಿಯಾರು ಗ್ರಾಮ, ಕೋಟ.<br>2) ದಿ ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಪ್ರಭು ಬಿಲ್ಡಿಂಗ್,<br>ಮುನ್ಸಿಪಲ್ ರಸ್ತೆ, ಕುಂದಾಪುರ. |

**ಅಧಿಸೂಚನೆ**

ಅರ್ಜಿದಾರರಾದ: ಶ್ರೀ ಸಂಜೀವ್ ಕುಂದರ್ ಇವರು ತಮ್ಮ ಮಗನಾದ ಶ್ರೀ ನಿತ್ಯಾನಂದ ಇವರು ಪ್ರತಿವಾದಿಗಳಾದ ಶ್ರೀ ಅಬ್ದುಲ್ ರಝಾಕ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 11.08.2004ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ, ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಹೆಚ್.ಕೆ. ಷಣ್ಮುಗಪ್ಪ**
ಪಿ.ಆರ್. 1683 ಕಾರ್ಮಿಕನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ.

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ,**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-28/ಎಫ್‌ಸಿ/2004/ ದಿನಾಂಕ: 30ನೇ ನವೆಂಬರ್, 2004**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ಶಶಿಕಲಾ,<br>ಶ್ರೀಗೋಪಾಲರವರ ಪತ್ನಿ, ಈಶ್ವರ ನಗರ,<br>ತೆಂಕ ನಿಡಿಯೂರು,<br>ಕ್ರೋಡಾಶ್ರಮ, ಉಡುಪಿ. | | 1) ಶ್ರೀ ಗುರುರಾಜ್ ರಾವ್,<br>ಶ್ರೀಪತಿರಾವ್ ರವರ ಮಗ, "ಶಂಕರ ಕೃಪಾ" ಕನಂಗಿ,<br>ಕೊಡವೂರು, ಉಡುಪಿ.<br>2) ನ್ಯಾಷನಲ್ ಇನ್ಶೂರೆನ್ಸ್ ಕಂ.ಲಿ., ಶ್ರೀರಾಮ್ ಸ್ಟೇಟ್<br>ಆಫೀಸರ್, 2ಎ ಪ್ರಕಾಶನ್ ರೋಡ್, ಟಿ. ನಗರ, ಚೆನ್ನೈ. |

**ಅಧಿಸೂಚನೆ**

ಅರ್ಜಿದಾರಳಾದ: ಶ್ರೀಮತಿ ಶಶಿಕಲಾ ಇವರು ತಮ್ಮ ಮಗನಾದ ಶ್ರೀ ನಿತಿನ್ ಇವರು ಪ್ರತಿವಾದಿಗಳಾದ ಶ್ರೀ ಗುರುರಾಜ್ ರಾವ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 18.08.2004ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ, ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಹೆಚ್.ಕೆ. ಷಣ್ಮುಗಪ್ಪ**
ಪಿ.ಆರ್. 1684 ಕಾರ್ಮಿಕನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ, ರಸ್ತೆ, ಬೆಂಗಳೂರು ನಗರ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: 29/ಸಂವಿ/ ಸಿ.ಓ.ಪಿ/2004, ದಿನಾಂಕ: 6ನೇ ನವೆಂಬರ್, 2004**

ಬೆಂಗಳೂರು ನಗರ, ಆಶೋಕನಗರ ಸಂಚಾರ ವಲಯದ ವ್ಯಾಪ್ತಿಯಲ್ಲಿರುವ ರೆಸಿಡೆನ್ಸಿ ರಸ್ತೆ, ರಿಚ್‌ಮಂಡ್ ರಸ್ತೆ, ಮ್ಯೂಸಿಯಂ ರಸ್ತೆ, ಮಗ್‌ರತ್ ರಸ್ತೆ, ವುಡ್ ಸ್ಟ್ರೀಟ್ ಮತ್ತು ಕ್ಯಾಂಪ್‌ಬೆಲ್ ರಸ್ತೆ ರಸ್ತೆಯ ಎರಡೂ ಬದಿಗಳಲ್ಲೂ ವಾಣಿಜ್ಯ ಮಳಿಗೆಗಳು, ಸರ್ಕಾರಿ ಕಛೇರಿಗಳು, ಶಾಲಾ ಕಾಲೇಜುಗಳು ಹಾಗೂ ಇತರೆ ಸರ್ಕಾರೇತರ ಕಛೇರಿಗಳಿರುವುದರಿಂದ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಹಾಗೂ ಅಪಘಾತಗಳು ಸಂಭವಿಸುತ್ತಿರುವುದು ಕಂಡು ಬಂದಿರುತ್ತದೆ. ಈ ರಸ್ತೆಗಳಲ್ಲಿ

ವಾಹನಗಳ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ಹಾಗೂ ವಾಹನಗಳ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯನ್ನು ನಿರ್ಬಂಧಿಸಿ ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸುವುದು ಹಾಗೂ ಇತರೆ ಸಂಚಾರ ಮಾರ್ಪಾಡುಗಳನ್ನು ಮಾಡುವುದು ಅವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ರೆಸಿಡೆನ್ಸಿ ರಸ್ತೆ:** ರೆಸಿಡೆನ್ಸಿ ರಸ್ತೆಯು ಪಶ್ಚಿಮ-ಪೂರ್ವಾಭಿಮುಖವಾಗಿ ರಿಚ್‌ಮಂಡ್ ವೃತ್ತದಿಂದ ಮೇಯೋಹಾಲ್ ಜಂಕ್ಷನ್ ವರೆಗೆ ಅಂದರೆ ಎಂ.ಜಿ. ರಸ್ತೆಯು ಸಂಧಿಸುವ ಜಂಕ್ಷನ್‌ವರೆಗೆ ದ್ವಿಮುಖ ಸಂಚಾರವಿದ್ದು ಈ ರಸ್ತೆಯಲ್ಲಿ ರಿಚ್‌ಮಂಡ್ ವೃತ್ತದ ಕಡೆಯಿಂದ ಮೇಯೋಹಾಲ್ ಕಡೆಗೆ ಕ್ಯಾಷ್ ಫಾರ್ಮಸಿ ವೃತ್ತ, ಆಶೀರ್ವಾದಂ ವೃತ್ತ, ಅಪೇರಾ ವೃತ್ತದ ಮೂಲಕ ಹಾಯ್ದು ಮೇಯೋಹಾಲ್ ಕಡೆಗೆ ಹರಿಯುವ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನಿಂದ ಸಂಚರಿಸುವ ಸಂಚಾರವನ್ನು ಅಂದರೆ ಮೇಯೋಹಾಲ್ ವೃತ್ತದ ಕಡೆಯಿಂದ ರೆಸಿಡೆನ್ಸಿ ರಸ್ತೆಯ ಮೂಲಕ ರಿಚ್‌ಮಂಡ್ ವೃತ್ತವನ್ನು ಸೇರುವ ಸಂಚಾರವನ್ನು ನಿಷೇಧಿಸಿದೆ. ಈ ಸಂಚಾರವು ಮೇಯೋಹಾಲ್ ಜಂಕ್ಷನ್ ಆರಂಭದಲ್ಲೇ ಮುಕ್ತ ಎಡ ತಿರುವು ಪಡೆದು ಕಮೀಸರಿಯೇಟ್ ರಸ್ತೆ ಮೂಲಕ ಸಂಚರಿಸಿ ಮಗರತ್ ರಸ್ತೆ ಜಂಕ್ಷನ್‌ನಲ್ಲಿ ಪುನಃ ಎಡತಿರುವು ಪಡೆದು ಮಗರತ್ ರಸ್ತೆಯಲ್ಲಿ ಸಂಚರಿಸಿ ಹಾಸ್‌ಮೆಟ್ ಆಸ್ಪತ್ರೆಯ ಜಂಕ್ಷನ್‌ನಲ್ಲಿ ಬಲತಿರುವು ಪಡೆದು ಡಿಸೋಜಾ ವೃತ್ತವನ್ನು ಸೇರಿ ರಿಚ್‌ಮಂಡ್ ರಸ್ತೆಯ ಮೂಲಕ ಸಂಚರಿಸಲು ಅವಕಾಶ ಕಲ್ಪಿಸಲಾಗಿದೆ.

2. **ರಿಚ್‌ಮಂಡ್ ರಸ್ತೆ:** ರಿಚ್‌ಮಂಡ್ ರಸ್ತೆಯು ಪೂರ್ವ-ಪಶ್ಚಿಮವಾಗಿ ಹರಿದಿದ್ದು ಹಾಸ್‌ಮೆಟ್ ಆಸ್ಪತ್ರೆಯ ಜಂಕ್ಷನ್‌ನಿಂದ ರಿಚ್‌ಮಂಡ್ ವೃತ್ತದವರೆಗೆ ಹರಿದಿದ್ದು ಈ ರಸ್ತೆಯಲ್ಲಿನ ದ್ವಿಮುಖ ಸಂಚಾರ ವ್ಯವಸ್ಥೆಯನ್ನು ನಿರ್ಬಂಧಿಸಿ ಡಿಸೋಜ ಜಂಕ್ಷನ್ ಕಡೆಯಿಂದ ಡಿಸೋಜ ವೃತ್ತ, ಮದರ್ ಥೆರೇಸಾ ವೃತ್ತ, ಅಶೋಕನಗರ ಸಿಗ್ನಲ್ ವೃತ್ತದ ಮೂಲಕ ಹಾಯ್ದು ರಿಚ್‌ಮಂಡ್ ವೃತ್ತವನ್ನು ಸೇರುವ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ರಿಚ್‌ಮಂಡ್ ರಸ್ತೆಯ ಟರ್ಮಿನಲ್ಸ್ ಮೇಲುಸೇತುವೆಯ ಮೇಲಿನ ಸಂಚಾರವನ್ನು ಸೇರಿಕೊಂಡಂತೆ ರಿಚ್‌ಮಂಡ್ ರಸ್ತೆಯಲ್ಲಿ ಹರಿಯುವ ಸಂಚಾರವನ್ನು ನಿಷೇಧಿಸಲಾಗಿದೆ. ಈ ಸಂಚಾರವು ರಿಚ್‌ಮಂಡ್ ವೃತ್ತದಲ್ಲಿಯೇ ರೆಸಿಡೆನ್ಸಿ ರಸ್ತೆಯ ಕಡೆಗೆ ತಿರುಗಿ ರೆಸಿಡೆನ್ಸಿ ರಸ್ತೆಯ ಮೂಲಕ ಸಂಚರಿಸಲು ಅವಕಾಶ ಕಲ್ಪಿಸಲಾಗಿದೆ.

3. **ಮೇಲ್ಸೇತುವೆ ರಸ್ತೆ ಮೇಲೆ ಸಂಚರಿಸುವ ವಾಹನಗಳು:** ಕೆ.ಹೆಚ್. ರಸ್ತೆಯಿಂದ (ಡಬ್ಬಲ್ ರಸ್ತೆ) ಹಾಗೂ ಮಿಷನ್ ರಸ್ತೆ ಕಡೆಯಿಂದ ಮೇಲ್ಸೇತುವೆ ರಸ್ತೆ ಮೇಲೆ ಬಂದಂತಹ ವಾಹನಗಳು ರಿಚ್‌ಮಂಡ್ ರಸ್ತೆಗೆ ಇಳಿಯುವುದನ್ನು ನಿಷೇಧಿಸಲಾಗಿದೆ. ರಿಚ್‌ಮಂಡ್ ರಸ್ತೆ ಕಡೆಯಿಂದ ಕೆ.ಹೆಚ್. ರಸ್ತೆ ಕಡೆಗೆ ಹೋಗುವ ವಾಹನಗಳು ರಿಚ್‌ಮಂಡ್ ರಸ್ತೆಯಲ್ಲಿ ಮೇಲ್ಸೇತುವೆ ರಸ್ತೆಯನ್ನು ಹತ್ತಿ ಕೆ.ಹೆಚ್. ರಸ್ತೆಯಲ್ಲಿ (ಡಬ್ಬಲ್ ರಸ್ತೆ) ಇಳಿದು ಸಂಚರಿಸಲು ಅವಕಾಶ ಕಲ್ಪಿಸಿದೆ. ಕೆ.ಹೆಚ್. ರಸ್ತೆಯಿಂದ (ಡಬ್ಬಲ್ ರಸ್ತೆ) ಹಾಗೂ ಮಿಷನ್ ರಸ್ತೆ ಕಡೆಯಿಂದ ಬಂದಂತಹ ವಾಹನಗಳು ರೆಸಿಡೆನ್ಸಿ ರಸ್ತೆಗೆ ಹೋಗಲು ಮೇಲ್ಸೇತುವೆ ರಸ್ತೆಯಲ್ಲಿ ಹತ್ತಿ ರೆಸಿಡೆನ್ಸಿ ರಸ್ತೆಯಲ್ಲಿ ಇಳಿದು ಸಂಚರಿಸಲು ಅವಕಾಶ ಕಲ್ಪಿಸಿದೆ. ಮೇಲ್ಸೇತುವೆ ರಸ್ತೆಯ ಕೆ.ಹೆಚ್. ರಸ್ತೆ (ಡಬ್ಬಲ್ ರಸ್ತೆ) ಕಡೆಗಿನ ಭಾಗಶಃ ಮೇಲ್ಸೇತುವೆ ರಸ್ತೆಯನ್ನು ಹಗುರ ವಾಹನಗಳು ಚಲಿಸುವ ದ್ವಿಮುಖ ಸಂಚಾರ ರಸ್ತೆಯಾಗಿ ಮಾಡಿ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.

4. **ಮಗರತ್ ರಸ್ತೆ:** ಮಗರತ್ ರಸ್ತೆಯಲ್ಲಿ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯನ್ನು ನಿರ್ಬಂಧಿಸಿ ಷಾಪರ್ಸ್ ಸ್ಟಾಪ್ ಕಡೆಯಿಂದ ಬ್ರಿಗೇಡ್ ರಸ್ತೆಯ ಕಡೆಗೆ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಬ್ರಿಗೇಡ್ ರಸ್ತೆ (ಅಪೇರಾ ವೃತ್ತ)ಯಲ್ಲಿ ನಿರ್ಬಂಧಿಸಿ ರೆಸಿಡೆನ್ಸಿ ರಸ್ತೆಯ ಮೂಲಕ ಸಂಚಾರವನ್ನು ಮುಂದುವರಿಸಿ ಮೇಯೋ ಹಾಲ್ ಜಂಕ್ಷನ್ ಬಳಿಯಲ್ಲಿ ಕಮೀಸರಿಯೇಟ್ ರಸ್ತೆಯ ಕಡೆಗೆ ಬಲ ತಿರುವು ಪಡೆದು ಸಂಚರಿಸಲು ಅವಕಾಶ ಕಲ್ಪಿಸಿದೆ.

5. **ವುಡ್ ಸ್ಟ್ರೀಟ್:** ಈ ರಸ್ತೆಯಲ್ಲಿನ ದ್ವಿಮುಖ ಸಂಚಾರ ವ್ಯವಸ್ಥೆಯನ್ನು ಮಾರ್ಪಾಡು ಮಾಡಿ ಬ್ರಿಗೇಡ್ ರಸ್ತೆಯ ಕಡೆಯಿಂದ ಮದರ್ ಥೆರೇಸಾ ವೃತ್ತದ ಕಡೆಗೆ ಬರುವ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಮದರ್ ಥೆರೇಸಾ ವೃತ್ತದಲ್ಲಿ ನಿರ್ಬಂಧಿಸಿ ರಿಚ್‌ಮಂಡ್ ರಸ್ತೆಯಲ್ಲಿ ಮುಂದುವರಿಸಿ ಅಶೋಕನಗರ ಸಿಗ್ನಲ್ ವೃತ್ತದಲ್ಲಿ ಬಲತಿರುವು ಪಡೆದು ಹಳೇ ಶೂಲೆ ಪೊಲೀಸ್ ಠಾಣೆ ಜಂಕ್ಷನ್ ಮೂಲಕ ಮ್ಯೂಸಿಯಂ ರಸ್ತೆಯನ್ನು ಸೇರಿ ಸಂಚರಿಸಲು ಅವಕಾಶ ಮಾಡಿಕೊಡಲಾಗಿದೆ.

6. **ಕ್ಯಾಂಪ್‌ಬೆಲ್ ರಸ್ತೆ:** ಈ ರಸ್ತೆಯಲ್ಲಿ ಈಗಾಗಲೇ ಜಾರಿಯಲ್ಲಿರುವ ಏಕಮುಖ ಸಂಚಾರ ವ್ಯವಸ್ಥೆಯಲ್ಲಿನ ದಿಕ್ಕನ್ನು ಅದಲು ಬದಲು ಮಾಡಿ ಅಂದರೆ ಹೊಸೂರು ಮುಖ್ಯ ರಸ್ತೆಯ ಕಡೆಯಿಂದ ಕ್ಯಾಂಪ್‌ಬೆಲ್ ರಸ್ತೆಯ ಮೂಲಕ ಮದರ್ ಥೆರೇಸಾ ರಸ್ತೆಯ ಮೂಲಕ ಸೆಂಟ್ ಫಿಲೋಮಿನಾ ಆಸ್ಪತ್ರೆಯ ಮುಂಭಾಗದ ರಸ್ತೆಯಲ್ಲಿ ಸಂಚರಿಸಿ ಡಿಸೋಜಾ ವೃತ್ತವನ್ನು ಸೇರಲು ಅವಕಾಶ ಮಾಡಿಕೊಡಲಾಗಿದೆ. ವಿರುದ್ಧ ದಿಕ್ಕಿನ ಸಂಚಾರವನ್ನು ಆರಂಭದಲ್ಲೇ ನಿರ್ಬಂಧಿಸಿ ಡಿಸೋಜ ವೃತ್ತ ಮತ್ತು ಮದರ್ ಥೆರೇಸಾ ರಸ್ತೆಯಿಂದ ಕ್ಯಾಂಪ್‌ಬೆಲ್ ರಸ್ತೆಯಲ್ಲಿ ಹೊಸೂರು ರಸ್ತೆಯನ್ನು ಸೇರುವ ಸಂಚಾರವನ್ನು ರಿಚ್‌ಮಂಡ್ ರಸ್ತೆಯಲ್ಲಿ ಮುಂದುವರಿಸಿ ಅಶೋಕನಗರ ಸಿಗ್ನಲ್ ವೃತ್ತದ ಮೂಲಕ ಎಡ ತಿರುವು ಪಡೆದು ಹೊಸೂರು ರಸ್ತೆಯನ್ನು ಸೇರಿ ಸಂಚರಿಸಲು ಅವಕಾಶ ಕಲ್ಪಿಸಲಾಗಿದೆ.

7. **ಮ್ಯೂಸಿಯಂ ರಸ್ತೆ:** ಮ್ಯೂಸಿಯಂ ರಸ್ತೆಯಲ್ಲಿ ಆಶೀರ್ವಾದಂ ವೃತ್ತದಿಂದ ಶೂಲೆ ಜಂಕ್ಷನ್‌ವರೆಗೆ ದ್ವಿಮುಖ ಸಂಚಾರವಿದ್ದು ಈ ಸಂಚಾರದಲ್ಲಿ ಶೂಲೆ ಜಂಕ್ಷನ್‌ನಿಂದ ಆಶೀರ್ವಾದಂ ವೃತ್ತದವರೆಗೆ ದಕ್ಷಿಣದಿಂದ ಉತ್ತರಕ್ಕೆ ಸಂಚರಿಸುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಆಶೀರ್ವಾದಂ ಸರ್ಕಲ್‌ನಿಂದ ಶೂಲೆ ಜಂಕ್ಷನ್‌ವರೆಗೆ ಸಂಚರಿಸುವ ಸಂಚಾರವನ್ನು ನಿಷೇಧಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:01.12.2004 ರಿಂದ ಪ್ರಾಯೋಗಿಕವಾಗಿ ಒಂದು ತಿಂಗಳ ಕಾಲ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 06.11.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪಿ.ಆರ್. 1685 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ: ಎಲ್.ಆರ್.ಎಫ್./ ಸಿಆರ್-66/04-05, ಬೆಂಗಳೂರು, ದಿನಾಂಕ: 17ನೇ ನವೆಂಬರ್, 2004**

**ವಿಷಯ :** ಮೆ: ಡೈನಾಸ್ಟಿ ಡೆವಲಪರ್ಸ್ ಪ್ರೈ.ಲಿ., ಎಂಬೆಸ್ಸಿ ಪಾಯಿಂಟ್, ನಂ.150, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು-01 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಕೋಡಿಹಳ್ಳಿ ಗ್ರಾಮದ ಸರ್ವೆ ನಂ. 140, 141, 141/1ಎ, 142, 141/1ಎ1 ಮತ್ತು 144 ರಲ್ಲಿ 8-20 ಎಕರೆ: ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕೈಗಾರಿಕಾ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ :** ವಿಶೇಷ ಜಿಲ್ಲಾಧಿಕಾರಿಗಳವರ ಸ್ಥಳ ಪರಿಶೀಲನಾ ವರದಿ ದಿನಾಂಕ: 04.11.2004ರ ಆದೇಶ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖದ ಆದೇಶದಂತೆ.

ಮೆ: ಡೈನಾಸ್ಟಿ ಡೆವಲಪರ್ಸ್ ಪ್ರೈ.ಲಿ., ಎಂಬೆಸ್ಸಿ ಪಾಯಿಂಟ್, ನಂ.150, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು-01 ರವರು ಬೆಂಗಳೂರು ಪೂರ್ವ ತಾಲ್ಲೂಕು ವರ್ತೂರು ಹೋಬಳಿ, ಕೋಡಿಹಳ್ಳಿ ಗ್ರಾಮದ, ಸರ್ವೆ ನಂ. 140, 141, 141/1ಎ, 142, 141/1ಎ1 ಮತ್ತು 144 ರಲ್ಲಿ 8-20 ಎಕರೆ: ಗುಂಟೆ ಜಮೀನನ್ನು ಕೈಗಾರಿಕಾ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ 15ಎ ಮತ್ತು ನಮೂನೆ 15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್ ಬೆಂಗಳೂರು ಪೂರ್ವ ತಾಲ್ಲೂಕು, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್ (109) ಸಿ.ಆರ್.06/04-05, ದಿನಾಂಕ:04.11.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 140, 141, 141/1ಎ, 142, 141/1ಎ1 ಮತ್ತು 144 ರಲ್ಲಿ 8-20 ಎಕರೆ: ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯ ಸಹಕಾರ ಸಂಘಗಳ ನೋಂದಣಾಧಿಕಾರಿಗಳ ಕಛೇರಿ, ಕರ್ನಾಟಕ, ಬೆಂಗಳೂರು, ದಿನಾಂಕ: 20.03.2002ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಕೈಗಾರಿಕಾ ಉದ್ದೇಶಕ್ಕೆ 10 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1)(11) ಮತ್ತು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು ವರ್ತೂರು ಹೋಬಳಿ, ಕೋಡಿಹಳ್ಳಿ ಗ್ರಾಮದ, ಸರ್ವೆ ನಂ. 140, 141, 141/1ಎ, 142, 141/1ಎ1 ಮತ್ತು 144ರಲ್ಲಿ 8-20 ಎಕರೆ: ಗುಂಟೆ ಜಮೀನನ್ನು ಮೆ:ಡೈನಾಸ್ಟಿ ಡೆವಲಪರ್ಸ್ ಪ್ರೈ.ಲಿ., ಎಂಬೆಸ್ಸಿ ಪಾಯಿಂಟ್, ನಂ.150, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು-01 ರವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ಅಧಿಸೂಚನೆ ತಿದ್ದುಪಡಿ ಸಂಖ್ಯೆ: ವ್ಯಾಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003ರಂತೆ ಕೈಗಾರಿಕಾ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಈ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಸ್ತಾಪಿತ ಜಮೀನು ಖರೀದಿಸಲು ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ಕಲಂ 3ರಲ್ಲಿ ಹೇಳಿರುವಂತೆ, ಶೇಕಡ 55 ಫೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾವಣೆ ಮಾಡಬಾರದು.
3) ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯ ಹಾಗೂ ಕೈಗಾರಿಕಾ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಬಗ್ಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
5) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರುವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6) ಸದರಿ ಜಮೀನುಗಳನ್ನು ಕೈಗಾರಿಕಾ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಲು ಸಂಬಂಧಪಟ್ಟ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಿಂದ ಅನುಮತಿ ಪತ್ರ ಪಡೆಯತಕ್ಕದ್ದು.
7) ಸದರಿ ಜಮೀನನ್ನು ಕೈಗಾರಿಕಾ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಲು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿ ಪಡೆಯತಕ್ಕದ್ದು.
8) ಸದರಿ ಜಮೀನಿನಲ್ಲಿರುವ ಅನಧಿಕೃತ ಕಟ್ಟಡವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಸಕ್ರಮಗೊಳಿಸತಕ್ಕದ್ದು.
9) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
10) ಈ ಅನುಮತಿಯು ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಗಳಡಿ ಆಗತ್ಯತ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1686

ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕಟಣೆ**

**ಸಂಖ್ಯೆ: ಎಂಎಜಿ (2) ಸಿಆರ್-170/ 2000-01, ದಿನಾಂಕ: 29ನೇ ನವೆಂಬರ್, 2004**

**ವಿಷಯ :** ಚಿತ್ರದುರ್ಗ ನಗರದಲ್ಲಿ ಆಟೋರಿಕ್ಷಾ ನಿಲ್ದಾಣಗಳ ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ :** 1. ಈ ಪ್ರಾಧಿಕಾರದ ಪ್ರಕಟಣೆ ಸಂಖ್ಯೆ: ಎಂ.ಎ.ಜಿ.(2) ಸಿ.ಆರ್. 170/2000-01 ದಿನಾಂಕ: 03.10.2001.

2. ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಇವರ ಪತ್ರ ಸಂಖ್ಯೆ: ಡಿ.ಪಿ.ಓ. 236/2004, ದಿನಾಂಕ:05.08.2004.

ದಿನಾಂಕ: 03.10.2001ರಲ್ಲಿ ಈ ಪ್ರಾಧಿಕಾರದಿಂದ ಚಿತ್ರದುರ್ಗ ನಗರದಲ್ಲಿ ಒಟ್ಟು 43 ಕಡೆ ಆಟೋರಿಕ್ಷಾ ನಿಲ್ದಾಣಗಳನ್ನು ಹಾಗೂ ಏಕಮುಖ ಸಂಚಾರ ರಸ್ತೆಗಳನ್ನು 1963ರ ಕರ್ನಾಟಕ ಪೊಲೀಸ್ ಕಾಯ್ದೆ ಕಲಂ 31(1)(ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ 1988ರ ಮೋಟಾರು ವಾಹನಗಳ ಕಾಯ್ದೆ ಕಲಂ 112, 115, 116 ಮತ್ತು 117ರ ಪ್ರಕಾರ ಸಾರ್ವಜನಿಕ ಹಿತದೃಷ್ಟಿಯಿಂದ ಪರಿಗಣಿಸಿ ಪ್ರಕಟಣೆಗೊಳಿಸಲಾಗಿತು.

ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಇವರ ದಿನಾಂಕ: 05.08.2004ರಂತೆ ಉಲ್ಲೇಖ (1)ರ ಈ ಪ್ರಾಧಿಕಾರದ ಪ್ರಕಟಣೆಯ ಕ್ರಮ ಸಂಖ್ಯೆ: 14ನ್ನು ಬದಲಾವಣೆ ಮಾಡಿ ಸಾರ್ವಜನಿಕರ ಹಾಗೂ ರೋಗಿಗಳ ಹಿತರಕ್ಷಣೆಗಾಗಿ ಆದೇಶ ಹೊರಡಿಸಿದೆ.

1) ಸರ್ಕಾರಿ ಆಸ್ಪತ್ರೆಯ ಮುಂಭಾಗದ ಗೋಡೆ ಬದಿಯನ್ನು ಅಂದರೆ ರಸ್ತೆಯ ದಕ್ಷಿಣ ಭಾಗವನ್ನು ವಾಹನ ನಿಲುಗಡೆ ನಿಷೇದಿತ ಪ್ರದೇಶವೆಂದು ಘೋಷಿಸಲಾಗಿದೆ.
2) ಸಾರ್ವಜನಿಕರ ಮತ್ತು ರೋಗಿಗಳ ಆಸ್ಪತ್ರೆಗೆ ಹೋಗಿ ಬರಲು ಅನುಕೂಲವಾಗುವಂತೆ ಆಸ್ಪತ್ರೆ ಮುಂಭಾಗದ ಪಾರ್ಕ್ ಪಕ್ಕದ ರಸ್ತೆಯ ಬದಿಯಲ್ಲಿ, ಅಂದರೆ ರಸ್ತೆಯ ಉತ್ತರ ಭಾಗದಲ್ಲಿ ಹೊಸದಾಗಿ ಆಟೋನಿಲ್ದಾಣ ನಿರ್ಮಿಸಿ ಆದೇಶಿಸಿದೆ.
3) ಜಿಲ್ಲಾ ಆಸ್ಪತ್ರೆಯ ಮುಂಭಾಗದ ಬಸ್‌ಸ್ಟ್ಯಾಂಡ್‌ನಿಂದ ಆಸ್ಪತ್ರೆ ಮುಂಭಾಗದ ರಸ್ತೆಯಿಂದ ಜೋಗಿಮಟ್ಟಿ ಸರ್ಕಲ್ ವರೆಗಿನ ಪ್ರದೇಶವನ್ನು ನಿಶ್ಯಬ್ಧ ವಲಯವೆಂದು ಘೋಷಿಸಿದೆ.

**ಎಸ್.ಹೆಚ್. ವಿಜಯಕುಮಾರ್**
ಅಪರ ಜಿಲ್ಲಾ ದಂಡಾಧಿಕಾರಿಗಳು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 1687

**OFFICE OF THE DISTRICT MAGISTRATE, KOLAR DISTRICT KOLAR**

**NOTIFICATION**

**No. MAG3:MSC:148:2004-05, Dated: 22nd November, 2004**

The Assistant Regional transport Officer, Chikkaballapur and Sub Inspector of Police, Chikkaballapur Town Police Station in their letter's dated: 03.11.2004 and 05.10.2004 have requested to issue Notification to restrict introduction of any more buses to Municipal Bus Stand and the use of road particularly between Kalavara to Chikkaballapur Via Islampur or A.P.M.C. Yard for the following reasons.

1. The number of motor Vehicles has increased in Chikkaballapur Town, resulting in Traffic Congestion, Air Pollution, Causing difficulty for other road users and number of accidents has increased considerly.
2. The Municipal Bus Stand at Chikkaballapur Town is very small and over crowded as it is a common bus stand for K.S.R.T.C. private buses and maxicabs and the bus stand is congested as it is holding lots of shops along its either sides (within the Bus Stand).
3. Large number of vehicles flow from Doddaballapur via Kalawara towards Chikkaballapur. There on about 700 two wheelers, about 180 Autorikshawas, about 500 cars, 45 tractors and power tillers about 60 bullock carts. About 13 buses performing 78 singles per day and are using the said road sector. Lorries are also playing on the same road but do not enter the bus stand. The condition of the said road sector is such that it can not withstand so many vehicles. The road is very narrow. At a portion the road passes above the lake where the footpath on the either side of the road is very small and it is a single road. The distance from Doddaballapur to Chikkaballapur is about 35 kms and every 5 to 10 minutes one bus would play apart from several other vehicles. This is causing danger to pedestrians particularly school children and other road users.

The R.T.O., Kolar has opined the report given by the A.R.T.O., Chikkaballapur for issue of Notification.

After considering the report of the A.R.T.O., Chikkaballapur, Sub Inspector of Police, Town Police Station, Chikkaballapur Dated: 03.11.2004 and 05.10.2004 and R.T.O., Kolar in their letter No. RTA KLR MPR 24:2004-05 Dated: 19.11.2004 releasing the necessity to ease the pressure of vehicular movement and to ensure smooth vehicular movement I G.N. Nayak, District Magistrate, Kolar District do hereby in exercise of powers conferred under section 115 of the M.V. Act, 1988 and rule 221 A of the KMV Rules 1989 (2nd Amendment) 1990 issue notification in respect to restrict introduction of anymore buses to Municipal Bus Stand and the use of road between Kalawara to Chikkaballapur Via Islampur in view of the liberalised in grant of permits under the New MV Act, 1988 the Authority take action accordingly to restrict in issuing permits.

The Superintendent of Police, Kolar shall be competent to correct necessary sign boards under sec. 116 of the M.V. Act 1988 and Rule 221 (2) of the KMV Rules 1989 (2nd amendment 1990).

The above order shall be inforce from 22nd November, 2004 until further orders.

The Order issued under my sign and seal of this day the 22nd November 2004.

PR-1688 **G.N. NAYAK**

District Magistrate, Kolar District.

**ಜಿಲ್ಲಾಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂ: ಹಿಂವಅಇ: ಬೆಂಗ್ರಾ:ಬಿ3: ಸಿಆರ್-4:04-05, ಬೆಂಗಳೂರು, ದಿನಾಂಕ: 31ನೇ ಜುಲೈ, 2004**

**ವಿಷಯ :** 2004-05ನೇ ಸಾಲಿನಲ್ಲಿ ಬೆಂಗಳೂರು (ಗ್ರಾ) ಜಿಲ್ಲೆಯಿಂದ ಹಿಂದುಳಿದ ವರ್ಗಗಳ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ ಅರ್ಜಿಗಳನ್ನು ಕರೆಯುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್-68: ಎಸ್‌ಇಡಬ್ಲ್ಯೂ 89, ದಿನಾಂಕ:02.11.90.

2. ಸರ್ಕಾರದ ಆದೇಶ ಸಂಖ್ಯೆ: ಸಕಇ 205 ಬಿಎಂಎಸ್ 99, ದಿನಾಂಕ: 17.10.89.

2004-05ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಹಿಂದುಳಿದ ವರ್ಗದವರಾದ ಅಂದರೆ ವರ್ಗ-1, 2ಎ, 3ಎ, 3ಬಿ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ ಹಾಗೂ ತರಬೇತಿ ಅವಧಿಯಲ್ಲಿ ತರಬೇತಿ ಭತ್ಯೆ ಮಂಜೂರಾತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಹಿಂದುಳಿದ ವರ್ಗಗಳಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಬಲ್ಲ ಕಾನೂನು ಪದವೀಧರ ಅಭ್ಯರ್ಥಿಗಳ ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಆಯ್ಕೆ ಸಮಿತಿ ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು (ಗ್ರಾ) ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು ಇವರ ಕಛೇರಿಯಲ್ಲಿ ದಿನಾಂಕ: 28.08.2004ರೊಳಗೆ ಸಲ್ಲಿಸುವುದು.

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿ ಮುಗಿಸಿ 2 ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 150 ಬಿಸಿಎ 94, ದಿನಾಂಕ: 17ನೇ ಸೆಪ್ಟೆಂಬರ್ 94ರ ಆದೇಶದ ಅನುಸಾರ ಹಿಂದುಳಿದ ವರ್ಗ-1, 2ಎ, 3ಎ ಮತ್ತು 3ಬಿ ವರ್ಗೀಕರಣಕ್ಕೆ ಒಳಪಟ್ಟಿರಬೇಕು ಹಾಗೂ ಮೇಲ್ಕಂಡ ವರ್ಗಗಳಿಗೆ ನಿಗದಿಪಡಿಸಲಾದ ಜಾತಿ ಆದಾಯ ಪ್ರಮಾಣ ಪತ್ರಗಳಲ್ಲಿ ವಿವರಗಳನ್ನು ಭರ್ತಿಮಾಡಿ, ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

3) ಪ್ರವರ್ಗ-1ನ್ನು ಹೊರತುಪಡಿಸಿ ಇತರೆ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ರೂ 15,000-00 ರೂ.ಗಳ ವಾರ್ಷಿಕ ಆದಾಯ ಮಿತಿಯನ್ನು ನಿಗದಿಪಡಿಸಲಾಗಿದೆ.

4) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

5) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳು ಮೀರಿರಬಾರದು. ಆದರೆ ವರ್ಗ 1ರ ಅಭ್ಯರ್ಥಿಗಳಿಗೆ ಒಂದು ವರ್ಷದ ರಿಯಾಯ್ತಿ ಇದ್ದು, ಅವರುಗಳು 31 ವರ್ಷ ಮೀರಿರಬಾರದು.

6) ಅಭ್ಯರ್ಥಿಯ ಕೌಟುಂಬಿಕ ವಾರ್ಷಿಕ ವರಮಾನ ರೂ. 15,000-00 ಗಳಿಗೆ ಮೀರಿರಬಾರದು. ಆದರೆ ವರ್ಗ-1ರಲ್ಲಿ ಬರುವ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ.

ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆದರೆ ಕೇಂದ್ರ ಸರ್ಕಾರ: ರಾಜ್ಯ ಸರ್ಕಾರದ ಕೆಲಸ ಸಿಕ್ಕಿದ ಅಭ್ಯರ್ಥಿಗಳಿಗೆ ಈ ಬಗ್ಗೆ ರಿಯಾಯಿತಿ ಇರುತ್ತದೆ.

7) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿಯ ಅವಧಿಯಲ್ಲಿ ತಿಂಗಳಿಗೆ 1,000-00 ರೂ.ಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಆಯ್ಕೆ ಸಮಿತಿಯು ಪಬ್ಲಿಕ್ ಪ್ರಾಸಿಕ್ಯೂಟರ್ಸ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲಿ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿಕೊಡಲಾಗುವುದು.

9) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ಧನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

10) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟು ಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10 ರಷ್ಟು ಬಡ್ಡಿಯೊಂದಿಗೆ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

11) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-1 ಇವರ ಕಛೇರಿಯ ವೇಳೆಯಲ್ಲಿ ಪಡೆಯಬಹುದು.

12) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯು ಸಂದರ್ಶನದ ದಿನಾಂಕ ಹಾಗೂ ಸ್ಥಳಗಳನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

13) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

14) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 1689

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯದ ನಡವಳಿಕೆಗಳು

**ವಿಷಯ :** ಚಿಕ್ಕಮಗಳೂರು ಜಿಲ್ಲೆಯ ವಿವಿಧ ರಸ್ತೆಗಳಲ್ಲಿ ಅಧಿಕ ಭಾರ ಹೊತ್ತು ಸಾಗುವ ಸರಕು ಸಾಗಣೆ ವಾಹನಗಳ ಸಂಚಾರ ನಿರ್ಬಂಧಿಸುವ ಬಗ್ಗೆ.

**ಉಲ್ಲೇಖ :**
1. ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಪತ್ರ ಸಂಖ್ಯೆ: ಇಎಲ್‌ಹೆಚ್/ ಸಿಟಿಎ/ ಎಇ.2/ ಅಧಿಕ ಭಾರದ ವಾಹನಗಳು/ 2704/04-05 ದಿನಾಂಕ: 10.11.2004 ರಲ್ಲಿನ ಮಾನ್ಯ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಅವರ ಆದೇಶ ದಿನಾಂಕ: 17.11.2004.
2. ಕಾರ್ಯಪಾಲಕ ಅಭಿಯಂತರರು, ಪಿ.ಡಬ್ಲ್ಯುಡಿ. ಚಿಕ್ಕಮಗಳೂರು ಇವರು ನೀಡಿರುವ ಸೇತುವೆಗಳ ವಿವರಗಳ ಪಟ್ಟಿ ದಿನಾಂಕ: 10.11.2004.
3. ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು ಇವರ ಪತ್ರ ಸಂ. ಎನ್‌ಹೆಚ್‌ಡಿ/ ಎಂ.ಎನ್.ಜಿ/ ಎಇ.1/ ಅಧಿಕ ಭಾರ/ 04-05 3602 ದಿನಾಂಕ: 05.08.2004.
4. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರ ಅ.ಸ.ಪ. ಪತ್ರ ಸಂಖ್ಯೆ: ಪ್ರಾಸಾಅ/ ಚಿಮ/ ಡಿಎಸ್.ಎ/ ಅಧಿಕ ಭಾರ ಸಾಗಣೆ ವಾಹನ/ 04-05, ದಿನಾಂಕ: 27.11.2004.
5. ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಚಿಕ್ಕಮಗಳೂರು, ಇದರ ನಡಾವಳಿ ದಿನಾಂಕ: 29.11.2004.

**ಪ್ರಸ್ತಾವನೆ:**

1) ಉಲ್ಲೇಖ (1)ರಲ್ಲಿ ಕಾಣಿಸಲಾದ ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರು ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು, ಇವರಿಗೆ ಬರೆದ ಪತ್ರದಲ್ಲಿ ರಾಷ್ಟ್ರೀಯ ಹೆದ್ದಾರಿ 13ರಲ್ಲಿ ಅಧಿಕ ಭಾರ ಹೊತ್ತು ಸಾಗುವ ಸರಕು ಸಾಗಣೆ ವಾಹನಗಳಿಂದ ಹೆದ್ದಾರಿಯು ಹಾಳಾಗುತ್ತಿದ್ದು, ಸೇತುವೆಗಳು ಕುಸಿದು ಬೀಳುತ್ತಿದ್ದು, ಅಧಿಕ ಭಾರ ಹೊತ್ತು ಸಾಗುವ ವಾಹನಗಳನ್ನು ನಿಷೇದಿಸಲು ಕೂಡಲೇ ಕ್ರಮ ಕೈಗೊಳ್ಳುವಂತೆ ವಿನಂತಿಸಿರುತ್ತಾರೆ.

ಜಿಲ್ಲಾಧಿಕಾರಿಗಳು ಸದರಿ ಪತ್ರವನ್ನು ಉಲ್ಲೇಖಿಸಿ ವಿಷಯದ ಬಗ್ಗೆ ಪೂರ್ಣವಾಗಿ ಪರಿಶೀಲಿಸಿ ವರದಿಯನ್ನು ನೀಡುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರಿಗೆ ದಿನಾಂಕ: 17.11.2004ರಂದು ಆದೇಶಿಸಿರುತ್ತಾರೆ.

2) ದಿನಾಂಕ: 10.11.2004ರ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಚಿಕ್ಕಮಗಳೂರು ಇವರ ಟಿಪ್ಪಣಿಯಲ್ಲಿ ಜಿಲ್ಲೆಯಲ್ಲಿ ಅಧಿಕ ಭಾರ ಹೊತ್ತು ಸಾಗುವ ವಾಹನ ಸಂಚಾರದಿಂದ ಹಾನಿಗೊಳಗಾಗಿರುವ/ ಹಾನಿಗೊಳಗಾಗಬಹುದಾದ ಸೇತುವೆಗಳ ವಿವರಗಳ ಪಟ್ಟಿಯನ್ನು ನೀಡಿರುತ್ತಾರೆ.

3) ಚಿಕ್ಕಮಗಳೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ರಾಷ್ಟ್ರೀಯ ಹೆದ್ದಾರಿ 13ರ ಸ್ಥಿತಿಗತಿ ಹಾಗೂ ವಾಹನಗಳ ಓಡಾಟ ಕುರಿತು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು ಇವರೊಂದಿಗೆ ಚರ್ಚಿಸಲಾಗಿದ್ದು, ಇವರು ಉಲ್ಲೇಖ (3)ರಲ್ಲಿ ಕಾಣಿಸಲಾದ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಇವರಿಗೆ ವಿಳಾಸಿಸಿದ ಪತ್ರದಲ್ಲಿ ರಾಷ್ಟ್ರೀಯ ಹೆದ್ದಾರಿ 13ರಲ್ಲಿನ ತೀರ್ಥಹಳ್ಳಿಯಿಂದ ಮಂಗಳೂರು ವರೆಗಿನ ಹೆದ್ದಾರಿಯಲ್ಲಿ ಅಧಿಕ ಕಬ್ಬಿಣದ ಅದಿರನ್ನು ಹೊತ್ತು ಸಾಗುತ್ತಿರುವ ಭಾರಿ ಸರಕು ವಾಹನಗಳಿಂದಾಗಿ ರಾಷ್ಟ್ರೀಯ ಹೆದ್ದಾರಿಯು ತೀವ್ರವಾಗಿ ಜಖಂಗೊಂಡು, ಈಗಾಗಲೇ ಹಲವಾರು ಸೇತುವೆಗಳು ಶಿಥಿಲಗೊಂಡಿದ್ದು ಕೂಡಲೇ ಕಬ್ಬಿಣದ ಅದಿರನ್ನು ಹೊತ್ತು ಸಾಗುವ ಭಾರಿ ಸರಕು ವಾಹನಗಳ ಸಂಚಾರವನ್ನು ರಾಷ್ಟ್ರೀಯ ಹೆದ್ದಾರಿ 13ರಲ್ಲಿ ನಿಷೇಧಿಸಬೇಕೆಂದು ಕೋರಿರುವ ಅಭಿಪ್ರಾಯವನ್ನೇ ಮತ್ತೊಮ್ಮೆ ವ್ಯಕ್ತಪಡಿಸಿರುತ್ತಾರೆ.

4) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರು ಉಲ್ಲೇಖ (4)ರಲ್ಲಿನ ತಮ್ಮ ವರದಿಯಲ್ಲಿ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಚಿಕ್ಕಮಗಳೂರು ಹಾಗೂ ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು ಇವರುಗಳ ವರದಿಯನ್ನು ಆಧರಿಸಿ, ಮುಂದಾಗಬಹುದಾದ ಭಾರಿ ಅನಾಹುತಗಳನ್ನು ತಡೆಗಟ್ಟುವ ಸಲುವಾಗಿ ಹಾಗೂ ರಸ್ತೆ ಮತ್ತು ಸೇತುವೆಗಳು ಪೂರ್ಣ ಹಾಳಾಗಿ ಸಂಚಾರವೇ ನಿಂತುಹೋಗಬಹುದಾದ ಸ್ಥಿತಿಯನ್ನು ತಪ್ಪಿಸುವ ಸಲುವಾಗಿ ಪರಿಸ್ಥಿತಿ ಸುಧಾರಿಸಿ, ಮುಂದಿನ ಆದೇಶದವರೆಗೆ ತರೀಕೆರೆ- ಹೊಸದುರ್ಗ ರಸ್ತೆ, ಬೀರೂರು- ಅಜ್ಜಂಪುರ ರಸ್ತೆ, ಅಜ್ಜಂಪುರ-ಬುಕ್ಕಾಂಭುದಿ ರಸ್ತೆ, ಕಡೂರು-ಮಂಗಳೂರು ರಸ್ತೆ ಹಾಗೂ ಚಿಕ್ಕಮಗಳೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ರಾಷ್ಟ್ರೀಯ ಹೆದ್ದಾರಿ 13 ಈ ರಸ್ತೆಗಳಲ್ಲಿ ಭಾರಿ ಸರಕು ಸಾಗಣೆ ವಾಹನಗಳ ಓಡಾಟವನ್ನು ಸೂಕ್ತ ರೀತಿಯಲ್ಲಿ ನಿರ್ಬಂಧಿಸುವುದು ಅತ್ಯಗತ್ಯವೆಂದು ಅಭಿಪ್ರಾಯಪಟ್ಟಿರುತ್ತಾರೆ.

5) ದಿನಾಂಕ: 29.11.2004 ರಂದು ನಡೆದ ಪ್ರಾದೇಶಿಕ ಸಾರಿಗೆ ಪ್ರಾಧಿಕಾರದ ಸಭೆಯಲ್ಲಿ ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಡಿ.ಎಂ. ಪುಟ್ಟೇಗೌಡ ಇವರು ಜಿಲ್ಲೆಯ ರಸ್ತೆಗಳಲ್ಲಿ ಕಬ್ಬಿಣದ ಅದಿರು ಸಾಗಿಸುವ ಭಾರಿ ವಾಹನಗಳ ಸಂಚಾರದ ಒತ್ತಡದಿಂದ ರಸ್ತೆಗಳು ಪೂರ್ಣ ಹಾಳಾಗಿದ್ದು, ಭಾರಿ ವಾಹನಗಳ ಸಂಚಾರ ನಿಷೇದಿಸಲು ಕ್ರಮಕೈಗೊಳ್ಳುವಂತೆ ಕೋರಿದ ಪತ್ರದ ಬಗ್ಗೆ ಚರ್ಚಿಸಲಾಯಿತು. ಶ್ರೀ ಡಿ.ಎಂ. ಪುಟ್ಟೇಗೌಡ, ಮಾನ್ಯ ವಿಧಾನ ಪರಿಷತ್ ಸದಸ್ಯರು ಇವರೂ ಸಹ ಸಭೆಯಲ್ಲಿ ಉಪಸ್ಥಿತರಿದ್ದು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಭಾರಿ ವಾಹನಗಳ ಸಂಚಾರವನ್ನು ಬೀರೂರು-ಅಜ್ಜಂಪುರ ರಸ್ತೆ, ಅಜ್ಜಂಪುರ- ಬುಕ್ಕಾಂಭುದಿ ರಸ್ತೆ, ಕಡೂರು-ಮಂಗಳೂರು ರಸ್ತೆ ಹಾಗೂ ಚಿಕ್ಕಮಗಳೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ರಾಷ್ಟ್ರೀಯ ಹೆದ್ದಾರಿ 13 ಈ ರಸ್ತೆಗಳಲ್ಲಿ ನಿಷೇದಿಸಬೇಕೆಂದು ಅಭಿಪ್ರಾಯಪಟ್ಟಿರುತ್ತಾರೆ.

ಹಾಗೆಯೇ ಪ್ರಾದೇಶಿಕ ಸಾರಿಗೆ ಪ್ರಾಧಿಕಾರವು ಸಹ ಸಮಸ್ಯೆಯ ತೀವ್ರತೆಯನ್ನು ಅರಿತು, ತರೀಕೆರೆ-ಹೊಸದುರ್ಗ ರಸ್ತೆ, ಬೀರೂರು- ಅಜ್ಜಂಪುರ ರಸ್ತೆ, ಅಜ್ಜಂಪುರ-ಬುಕ್ಕಾಂಭುದಿ ರಸ್ತೆ, ಕಡೂರು-ಮಂಗಳೂರು ರಸ್ತೆ ಹಾಗೂ ಚಿಕ್ಕಮಗಳೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ರಾಷ್ಟ್ರೀಯ ಹೆದ್ದಾರಿ 13 ಈ ರಸ್ತೆಗಳಲ್ಲಿ ಒಟ್ಟು ವಾಹನದ ತೂಕ ಅಂದರೆ, ವಾಹನದ ತೂಕ ಮತ್ತು ಸಾಗಣೆ ಮಾಡುವ ಸರಕಿನ ತೂಕವು 15,000 ಕೆ.ಜಿ.ಗಳಿಗಿಂತಲೂ ಹೆಚ್ಚಿನ ಭಾರಿ ಸರಕು ವಾಹನಗಳ ಸಂಚಾರವನ್ನು ನಿಷೇದಿಸಲು ತೀರ್ಮಾನಿಸಿರುತ್ತದೆ.

ಈ ಎಲ್ಲಾ ಮೇಲೆ ವಿವರಿಸಲಾದ ಕಂಡಿಕೆ 1 ರಿಂದ 5 ರವರೆಗಿನ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ- ಹೊಸದುರ್ಗ ರಸ್ತೆ, ಬೀರೂರು-ಅಜ್ಜಂಪುರ ರಸ್ತೆ, ಅಜ್ಜಂಪುರ- ಬುಕ್ಕಾಂಬುದಿ ರಸ್ತೆ, ಕಡೂರು-ಮಂಗಳೂರು ರಸ್ತೆ ಹಾಗೂ ಚಿಕ್ಕಮಗಳೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ರಾಷ್ಟ್ರೀಯ ಹೆದ್ದಾರಿ 13 ಈ ರಸ್ತೆಗಳಲ್ಲಿ ಭಾರಿ ಸರಕು ಸಾಗಣೆ ವಾಹನಗಳ ಸಂಚಾರದಿಂದ ಉಂಟಾಗಿರುವ ರಸ್ತೆ ಹಾಗೂ ಸೇತುವೆಗಳ ಹಾನಿಯಿಂದ ಮುಂದಾಗಬಹುದಾದ ಅಪಘಾತಗಳು ಹಾಗೂ ಇನ್ನಷ್ಟು ರಸ್ತೆ ಮತ್ತು ಸೇತುವೆಗಳ ಹಾನಿ ಹಾಗೂ ಸಂಚಾರ ಅಸ್ತವ್ಯಸ್ತ, ಇವುಗಳನ್ನು ತಪ್ಪಿಸುವ ಸಲುವಾಗಿ ಮೇಲ್ಕಂಡ ರಸ್ತೆಗಳಲ್ಲಿ ವಾಹನದ ಒಟ್ಟು ತೂಕ 15,000 ಕೆ.ಜಿ. ಗಳಿಗಿಂತಲೂ ಹೆಚ್ಚಿನ ಭಾರಿ ಸರಕು ವಾಹನಗಳ ಸಂಚಾರವನ್ನು ನಿಷೇಧಿಸಲು ತೀರ್ಮಾನಿಸಿ, ಈ ಕೆಳಗಿನ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಜೆ.1/ ಎಂಎಜಿ/ ಪಿಆರ್.239/ 04-05, ದಿನಾಂಕ: 29ನೇ ನವೆಂಬರ್, 2004**

ಶ್ರೀ ರಾಜೇಂದರ್ ಕುಮಾರ್ ಕಟಾರಿಯಾ, ಭಾ.ಆ.ಸೇ., ಜಿಲ್ಲಾ ದಂಡಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು ಕೇಂದ್ರ ಮೋಟಾರು ವಾಹನಗಳ ಕಾಯಿದೆ, 1988ರ ಸೆಕ್ಷನ್ 115 ಹಾಗೂ ಕರ್ನಾಟಕ ಮೋಟಾರು ವಾಹನಗಳ ನಿಯಮಾವಳಿಗಳು, 1989ರ ನಿಯಮ 221 (ಎ) (5)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ-ಹೊಸದುರ್ಗ ರಸ್ತೆ, ಬೀರೂರು-ಅಜ್ಜಂಪುರ ರಸ್ತೆ, ಅಜ್ಜಂಪುರ- ಬುಕ್ಕಾಂಭುದಿ ರಸ್ತೆ, ಕಡೂರು-ಮಂಗಳೂರು ರಸ್ತೆ ಹಾಗೂ ಚಿಕ್ಕಮಗಳೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ರಾಷ್ಟ್ರೀಯ ಹೆದ್ದಾರಿ 13 ಈ ರಸ್ತೆಗಳಲ್ಲಿ ವಾಹನಗಳ ಒಟ್ಟು ತೂಕ ಅಂದರೆ, ವಾಹನದ ತೂಕ ಮತ್ತು ಸಾಗಣೆ ಮಾಡುವ ಸರಕಿನ ತೂಕ 15,000 ಕೆ.ಜಿ.ಗಳನ್ನು ಮೀರಿದ ಭಾರಿ ಸರಕು ಸಾಗಣೆ ವಾಹನಗಳ ಸಂಚಾರವನ್ನು ದಿನಾಂಕ: 10.12.2004 ರಿಂದ ಜಾರಿಗೆ ಬರುವಂತೆ ನಿಷೇಧಿಸಿರುತ್ತೇನೆ.

**ರಾಜೇಂದರ್ ಕುಮಾರ್ ಕಟಾರಿಯಾ**

ಪಿ.ಆರ್. 1690

ಜಿಲ್ಲಾ ದಂಡಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳು,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ, ನಂ.17, ಜಯನಿವಾಸ, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು-4**

**ವಿಷಯ :** ಸಹಕಾರ ಸಂಘಗಳಿಗೆ ವಿಧಿಸಲ್ಪಡುವ ಲೆಕ್ಕಪರಿಶೋಧನಾ ಶುಲ್ಕ ದರ ಪರಿಷ್ಕರಣೆ ಹಾಗೂ ನಿಗದಿಪಡಿಸುವ ಕುರಿತು.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ:ಎ ಅಂಡ್ ಎಫ್:216:ಸೀಟಿ:59:ದಿನಾಂಕ: 20.01.1962.
2. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ.ಸಿ.05:ಇಸಿಎ:75: ದಿನಾಂಕ:16.01.1976.
3. ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ.ಸಿ:03:ಇಸಿಎ:76: ದಿನಾಂಕ:13.05.1976.
4. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ.ಸಿ.73:ಇಸಿಎ:76: ದಿನಾಂಕ:19.10.1976.
5. ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ:52:ಸೀಇಎ:85: ದಿನಾಂಕ: 13.10.1986.
6. ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ:283:ಸಿಎಲ್ಎಂ:96: ದಿನಾಂಕ:17.02.2001.
7. ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ:01:ಸಿಎಂಎಲ್:03: ದಿನಾಂಕ:16.05.2003.
8. ಈ ಕಛೇರಿಯ ಆದೇಶ ಸಂಖ್ಯೆ: ಎಡಿಎಫ್:26:96-97, ದಿನಾಂಕ:15.03.2001 ಮತ್ತು 17.09.2003.
9. ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ:99:ಸಿಎಲ್ಎಂ:2002, ಬೆಂಗಳೂರು, ದಿನಾಂಕ: 27.09.2004.

**ಪ್ರಸ್ತಾವನೆ:**

ಮೇಲಿನ ಉಲ್ಲೇಖಿತ 1 ರಿಂದ 7 ರವರೆಗಿನ ಆದೇಶಗಳನ್ವಯ ಕಾಲಕಾಲಕ್ಕೆ ಲೆಕ್ಕಪರಿಶೋಧನಾ ಶುಲ್ಕ ದರ ಪರಿಷ್ಕರಣೆ ಕುರಿತಂತೆ ಸರ್ಕಾರವು ಈ ಹಿಂದೆ ಆದೇಶಗಳನ್ನು ಹೊರಡಿಸಿದೆ. ಅದರನ್ವಯ ಉಲ್ಲೇಖ (8)ರಲ್ಲಿ ಈ ಕಛೇರಿಯಿಂದ ಸಹಕಾರ ಸಂಘಗಳು ಪಾವತಿಸಬೇಕಾದ ಲೆಕ್ಕಪರಿಶೋಧನಾ ಶುಲ್ಕದ ದರಗಳನ್ನು ನಿಗದಿಪಡಿಸಿ ಆದೇಶ ಹೊರಡಿಸಲಾಗಿರುತ್ತದೆ.

ಈ ಕೆಳಗಿನ ಆದೇಶವು ಉಲ್ಲೇಖ (8)ರಲ್ಲಿನ ಈ ಕಛೇರಿಯ ಹಿಂದಿನ ಆದೇಶಗಳನ್ನು ರದ್ದುಪಡಿಸಿದೆ. ಹಾಗೆಯೇ, ಉಲ್ಲೇಖ (9)ರ ಆದೇಶದಲ್ಲಿ ಸರ್ಕಾರವು ಈ ಹಿಂದೆ ಹೊರಡಿಸಿದ್ದ ಉಲ್ಲೇಖ (1) ರಿಂದ (7)ರ ವರೆಗಿನ ಸರ್ಕಾರದ ಆದೇಶಗಳನ್ನು ರದ್ದುಪಡಿಸಿರುತ್ತದೆ.

ನಂತರ ಉಲ್ಲೇಖಿತ ಕ್ರಮ ಸಂಖ್ಯೆ 9ರ ಆದೇಶದನ್ವಯ ಸರ್ಕಾರವು ಪ್ರಸ್ತುತ ಸಹಕಾರ ಸಂಘಗಳಿಗೆ ವಿಧಿಸಲ್ಪಡುವ ಲೆಕ್ಕಪರಿಶೋಧನಾ ಶುಲ್ಕ ದರಗಳಲ್ಲಿ ಪರಿಷ್ಕರಣೆ ಹಾಗೂ ಸರಳೀಕರಣ ಕುರಿತು ವಿಧಿವಿಧಾನಗಳ ಬಗ್ಗೆ ಅನುಮೋದನೆ ನೀಡಿರುವುದರಿಂದ, ಸಹಕಾರ ಸಂಘಗಳು ಪಾವತಿಸಬೇಕಾದ ಲೆಕ್ಕಪರಿಶೋಧನಾ ಶುಲ್ಕ/ ವೆಚ್ಚ ದರ ನಿಗದಿಪಡಿಸುವ ಕುರಿತು ಈ ಕಛೇರಿಯಿಂದ ಆದೇಶ ಹೊರಡಿಸಬೇಕಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ಸಂಖ್ಯೆ:ಎಡಿಎಫ್.ಲೆಪಶುಸೆ:61:2002-03, ದಿನಾಂಕ: 5ನೇ ನವೆಂಬರ್, 2004**

ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 30(1)ರಲ್ಲಿ ದತ್ತವಾದ ಅಧಿಕಾರದಂತೆ ಟಿ.ಎ. ಪಾರ್ಥಸಾರಥಿ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಆದ ನಾನು ಪ್ರತಿ ಸಹಕಾರ ಸಂಘವು ಪ್ರತಿ ವರ್ಷದ ಲೆಕ್ಕಪರಿಶೋಧನೆಗಾಗಿ ಸರ್ಕಾರಕ್ಕೆ ಲೆಕ್ಕಪರಿಶೋಧನಾ ಶುಲ್ಕವನ್ನು ಪಾವತಿಸಲು ಈ ಕೆಳಗಿನ ವಿವರದಂತೆ ದರವನ್ನು ನಿಗದಿಪಡಿಸಿ ಆದೇಶಿಸಿರುತ್ತೇನೆ.

1. ಯಾವುದೇ ಸಹಕಾರ ಸಂಘದ "ದುಡಿಯುವ ಬಂಡವಾಳ" ಅಥವಾ "ವ್ಯಾಪಾರ ವಹಿವಾಟು" ಇವೆರಡರಲ್ಲಿ ಯಾವುದು ಹೆಚ್ಚೋ ಅದರ ಆಧಾರದ ಮೇಲೆ ಲೆಕ್ಕಪರಿಶೋಧನಾ ಶುಲ್ಕವನ್ನು ಆಕರಿಸತಕ್ಕದ್ದು.

ಲೆಕ್ಕಪರಿಶೋಧನಾ ಶುಲ್ಕ ಆಕರಿಸುವ ದರ ಮತ್ತು ವಿಧಾನಗಳು ಈ ಕೆಳಕಂಡಂತೆ ಇರತಕ್ಕದ್ದು.

| ಕ್ರಮ ಸಂಖ್ಯೆ | ದುಡಿಯುವ ಬಂಡವಾಳ/ ವ್ಯಾಪಾರ ವಹಿವಾಟಿನ ಶ್ರೇಣಿ | ಲೆಕ್ಕಪರಿಶೋಧನಾ ಶುಲ್ಕ ಆಕರಿಸಬಹುದಾದ ದರ |
|---|---|---|
| 1. | ಸಂಸ್ಥೆಯ ದುಡಿಯುವ ಬಂಡವಾಳ/ ವ್ಯಾಪಾರ ವಹಿವಾಟು ರೂ.10 ಕೋಟಿಯವರೆಗೆ | ಪ್ರತಿ ಒಂದು 100 ರೂ.ಗಳ ದುಡಿಯುವ ಬಂಡವಾಳ/ ವ್ಯಾಪಾರ ವಹಿವಾಟಿಗೆ 20 ಪೈಸೆಯಂತೆ. |

| ಕ್ರಮ ಸಂಖ್ಯೆ | ದುಡಿಯುವ ಬಂಡವಾಳ/ ವ್ಯಾಪಾರ ವಹಿವಾಟಿನ ಶ್ರೇಣಿ | ಲೆಕ್ಕಪರಿಶೋಧನಾ ಶುಲ್ಕ ಆಕರಿಸಬಹುದಾದ ದರ |
|---|---|---|
| 2. | ಸಂಸ್ಥೆಯ ದುಡಿಯುವ ಬಂಡವಾಳ/ ವ್ಯಾಪಾರ ವಹಿವಾಟು ರೂ. 10 ಕೋಟಿ ಮೀರಿ ರೂ.50 ಕೋಟಿಗಳವರೆಗೆ ಇದ್ದಲ್ಲಿ. | ರೂ. 2,00,000.00 (ರೂ. ಎರಡು ಲಕ್ಷಗಳು)+ ರೂ.10 ಕೋಟಿಗೆ ಮೀರಿದ ಪ್ರತಿ 100 ರೂ.ಗಳ ದುಡಿಯುವ ಬಂಡವಾಳ/ ವ್ಯಾಪಾರ ವಹಿವಾಟಿಗೆ 15 ಪೈಸೆಯಂತೆ. |
| 3. | ಸಂಸ್ಥೆಯ ದುಡಿಯುವ ಬಂಡವಾಳ/ ವ್ಯಾಪಾರ ವಹಿವಾಟು ರೂ.50 ಕೋಟಿ ಮೀರಿದಾಗ | ರೂ. 8,00,000.00 (ರೂ. ಎಂಟು ಲಕ್ಷಗಳು) + ರೂ.50 ಕೋಟಿಗೆ ಮೀರಿದ ಪ್ರತಿ 100 ರೂ.ಗಳ ದುಡಿಯುವ ಬಂಡವಾಳ/ ವ್ಯಾಪಾರ ವಹಿವಾಟಿಗೆ 12 ಪೈಸೆಯಂತೆ. |

ಪರಂತು, ಕೆಳಕಂಡ ಸಹಕಾರ ಸಂಸ್ಥೆಗಳಿಗೆ ಅವುಗಳ ಆರ್ಥಿಕ ಪರಿಸ್ಥಿತಿಯನ್ನು ಗಣನೆಗೆ ತೆಗೆದುಕೊಳ್ಳದೇ ಈ ಕೆಳಕಂಡಂತೆ ಕನಿಷ್ಠ ಲೆಕ್ಕಪರಿಶೋಧನಾ ಶುಲ್ಕ ನಿಗದಿಪಡಿಸಲಾಗಿದೆ.

ಎ. ಗೃಹ ನಿರ್ಮಾಣ ಸಹಕಾರ ಸಂಘಗಳಿಗೆ ರೂ5,000-00 (ಐದು ಸಾವಿರ ರೂಪಾಯಿಗಳು)

ಬಿ. ಸಹಕಾರ ಸಕ್ಕರೆ ಕಾರ್ಖಾನೆಗಳಿಗೆ ರೂ. 20,000-00 (ಇಪ್ಪತ್ತು ಸಾವಿರ ರೂಪಾಯಿಗಳು)

ಸಿ. ಸಹಕಾರಿ ನೂಲಿನ ಗಿರಣಿಗಳಿಗೆ ರೂ10,000-00 (ಹತ್ತು ಸಾವಿರ ರೂಪಾಯಿಗಳು)

ಡಿ. ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ದಿ ಬ್ಯಾಂಕ್‌ಗಳಿಗೆ ರೂ. 20,000-00 (ಇಪ್ಪತ್ತು ಸಾವಿರ ರೂಪಾಯಿಗಳು)

ಇ. ಎ ಯಿಂದ ಡಿ ವರೆಗಿನ ಪ್ರವರ್ಗಗಳ ಸಹಕಾರ ಸಂಘಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಸಹಕಾರ ಸಂಘಗಳಿಗೆ ರೂ. 500-00 (ಐದು ನೂರು ರೂಪಾಯಿಗಳು)

ಮತ್ತು ಪರಂತು, ಕಟ್ಟಡ ನಿರ್ಮಾಣ ಅಥವಾ ಬಡಾವಣೆ ನಿರ್ಮಾಣ ಕೈಗೊಳ್ಳುತ್ತಿರುವ ಗೃಹ ನಿರ್ಮಾಣ ಸಹಕಾರ ಸಂಘಕ್ಕೆ ಮಾತ್ರ ಜಮಾ-ಖರ್ಚು ತಃಖ್ತೆಯ, ಜಮಾ ಕಡೆಯ ಒಟ್ಟು ಮೊತ್ತದಲ್ಲಿ ಸಂಘವು ಉಳಿತಾಯ ಖಾತೆ/ ಚಾಲ್ತಿ ಖಾತೆಯಿಂದ ಹಿಂದಕ್ಕೆ ಪಡೆದ ಮೊತ್ತ ಹಾಗೂ ಪ್ರಾರಂಭಿಕ ನಗದು/ ಬ್ಯಾಂಕ್ ಶಿಲ್ಕು ಅನ್ನು ಹೊರತುಪಡಿಸಿ ಬರುವ ಮೊತ್ತದ ಮೇಲೆ ಮೇಲಿನ ದರದಂತೆ ಲೆಕ್ಕಪರಿಶೋಧನಾ ಶುಲ್ಕ ವಿಧಿಸತಕ್ಕದ್ದು. ಉಳಿದ ಗೃಹ ನಿರ್ಮಾಣ ಸಹಕಾರ ಸಂಘಗಳಿಗೆ ದುಡಿಯುವ ಬಂಡವಾಳದ ಆಧಾರದ ಮೇಲೆ ಲೆಕ್ಕಪರಿಶೋಧನಾ ಶುಲ್ಕ ವಿಧಿಸತಕ್ಕದ್ದು.

2. **ಲೆಕ್ಕಪರಿಶೋಧನಾ ಶುಲ್ಕ ಆಕರಣೆ ಸಲುವಾಗಿ,**

i. "ದುಡಿಯುವ ಬಂಡವಾಳ" ಎಂದರೆ ಪಾವತಿಯಾದ ಷೇರು ಬಂಡವಾಳ, ಆಪದ್ದನ ಮತ್ತು ಎನ್.ಪಿ.ಎ. ಅವಕಾಶಗಳನ್ನೊಳಗೊಂಡಂತೆ ಇತರೆ ಎಲ್ಲಾ ನಿಧಿಗಳು, ಸಾಲಗಳು, ಠೇವಣಿಗಳು ಮತ್ತು ಹಂಚಿಕೆಯಾಗದ ಲಾಭ ಇವುಗಳ ಒಟ್ಟು ಮೊಬಲಗು.

ii. ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ದಿ ಬ್ಯಾಂಕ್‌ಗಳಿಗೆ ಸಂಬಂಧಿಸಿದಂತೆ, ದುಡಿಯುವ ಬಂಡವಾಳ ಎಂದರೆ ಪ್ರಸಕ್ತ ಸಾಲಿನಲ್ಲಿ ಅವುಗಳು ಠೇವಣಿಗಳ ಮೇಲೆ ನೀಡಿರುವ ಸಾಲಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಸಾಲಗಳು.

iii. "ವ್ಯಾಪಾರ ವಹಿವಾಟು" ಎಂದರೆ ಸಾಲದ ಮಾರಾಟ ಹಾಗೂ ದಲ್ಲಾಳಿ ಮಾರಾಟವನ್ನು ಒಳಗೊಂಡಂತೆ, ಪ್ರಸಕ್ತ ಸಾಲಿನಲ್ಲಿ ನಡೆಸಿದ ಒಟ್ಟು ಮಾರಾಟವಾಗಿರುತ್ತದೆ. ಆದರೆ, ಸರ್ಕಾರದ ಸಾರ್ವಜನಿಕ ಆಹಾರ ವಿತರಣಾ ಪದ್ಧತಿಯಡಿಯಲ್ಲಿನ ನಿಯಂತ್ರಿತ ಆಹಾರ ಸಾಮಗ್ರಿಯ ಮಾರಾಟ ಇದ್ದಲ್ಲಿ ಅಂತಹ ಮಾರಾಟದ ಶೇಕಡಾ 50ರಷ್ಟನ್ನು ವ್ಯಾಪಾರ ವಹಿವಾಟಿನಿಂದ ಕಳೆಯುವುದು.

ಪರಂತು, ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘಗಳ ಮತ್ತು ಇತರೆ ಮಾರಾಟ ಸಹಕಾರ ಸಂಘಗಳ ಬೈಲಾಗಳಲ್ಲಿ ದಲ್ಲಾಳಿ ಮಾರಾಟವನ್ನು ಕೈಗೊಳ್ಳಲು ಅವಕಾಶವಿದ್ದಲ್ಲಿ ಅಂತಹ ದಳ್ಳಾಳಿ ಮಾರಾಟದ ಮೊತ್ತವನ್ನು ಒಟ್ಟು ವ್ಯಾಪಾರ ವಹಿವಾಟಿನಿಂದ ಕಳೆಯತಕ್ಕದ್ದು. ಆದಾಗ್ಯೂ, ಈ ದಳ್ಳಾಳಿ ಮಾರಾಟಕ್ಕೆ ಸಂಬಂಧಿಸಿದಂತೆ ದಳ್ಳಾಳಿ ಮಾರಾಟದಿಂದ ಗಳಿಸಿದ ದಳ್ಳಾಳಿ ಮೊತ್ತಕ್ಕೆ ಶೇಕಡಾ 3ರಷ್ಟು ಲೆಕ್ಕಪರಿಶೋಧನಾ ಶುಲ್ಕವನ್ನು ವಿಧಿಸತಕ್ಕದ್ದು.

ಮತ್ತು ಪರಂತು, ನಿಯಂತ್ರಿತ ಆಹಾರ ಸಾಮಗ್ರಿ ಮಾರಾಟದ ಹಾಗೂ ದಳ್ಳಾಳಿ ಮಾರಾಟದ ವ್ಯವಹಾರಗಳ ಮೇಲೆ ಲೆಕ್ಕಪರಿಶೋಧನಾ ಶುಲ್ಕದ ರಿಯಾಯಿತಿ ಪಡೆಯುವ ಸಹಕಾರ ಸಂಘಗಳು ಈ ಮಾರಾಟವನ್ನು ಪ್ರತ್ಯೇಕವಾಗಿ ತೋರ್ಪಡಿಸುವ ಅವಶ್ಯ ಲೆಕ್ಕ ಖಾತೆಗಳನ್ನು ಕಡ್ಡಾಯವಾಗಿ ನಿರ್ವಹಿಸತಕ್ಕದ್ದು.

ಅಲ್ಲದೆ ಪರಂತು, ಸಹಕಾರ ಸಕ್ಕರೆ ಕಾರ್ಖಾನೆ ಮತ್ತು ನೂಲಿನ ಗಿರಣಿಗಳಿಗೆ ಸಂಬಂಧಿಸಿದಂತೆ ವ್ಯಾಪಾರ ವಹಿವಾಟು ಎಂದರೆ ಒಟ್ಟು ಉತ್ಪಾದನಾ ವೆಚ್ಚ (cost of production) ಅಥವಾ ಪ್ರಸಕ್ತ ಸಾಲಿನ ಮಾರಾಟ ಇವುಗಳಲ್ಲಿ ಯಾವುದು ಹೆಚ್ಚೋ ಅದು.

3. ಈ ಕೆಳಗಿನ ಪ್ರವರ್ಗಗಳ ಸಹಕಾರ ಸಂಘಗಳು ಈ ಕೆಳಗೆ ನಮೂದಿಸಿದ ದರದಲ್ಲಿ ಲೆಕ್ಕಪರಿಶೋಧನಾ ಶುಲ್ಕವನ್ನು ಪಾವತಿಸತಕ್ಕದ್ದು.

i. ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ದಿ ಬ್ಯಾಂಕುಗಳು ಕನಿಷ್ಟ ಲೆಕ್ಕಪರಿಶೋಧನಾ ಶುಲ್ಕ ರೂ. 20,000-00 ಗಳಿಗೆ ಒಳಪಟ್ಟು, ಕಂಡಿಕೆ (1)ರಲ್ಲಿ ನಿಗದಿಪಡಿಸಿದ ದರದಲ್ಲಿ ಲೆಕ್ಕಾಚಾರ ಮಾಡಿದ ಶೇಕಡಾ 50 ರಷ್ಟು.

ii. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಕನಿಷ್ಟ ಲೆಕ್ಕಪರಿಶೋಧನಾ ಶುಲ್ಕ ರೂ. 500-00 ಗಳಿಗೆ ಒಳಪಟ್ಟು ಕಂಡಿಕೆ (1)ರಲ್ಲಿ ನಿಗದಿಪಡಿಸಿದ ದರದಲ್ಲಿ ಲೆಕ್ಕಾಚಾರ ಮಾಡಿದ ಶೇಕಡಾ 50ರಷ್ಟು

iii. ಮಹಿಳಾ ಸಹಕಾರ ಬ್ಯಾಂಕುಗಳು, ಸಹಕಾರ ಸಕ್ಕರೆ ಕಾರ್ಖಾನೆಗಳು, ಸಹಕಾರಿ ನೂಲಿನ ಗಿರಣಿಗಳು ಮತ್ತು ನೀರು ಬಳಕೆದಾರರ ಸಹಕಾರ ಸಂಘಗಳಿಗೆ, ಅವುಗಳ ಪ್ರಥಮ ಸರ್ವಸದಸ್ಯರ ಸಭೆಯ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಲೆಕ್ಕಪರಿಶೋಧನಾ ಶುಲ್ಕ ಆಕರಣೆಯಿಂದ ವಿನಾಯಿತಿ ನೀಡಲಾಗಿದೆ.

iv. ಆದಾಗ್ಯೂ ಕೆಳಕಂಡ ಪ್ರವರ್ಗಗಳ ಸಹಕಾರ ಸಂಘಗಳು/ ಸಂಸ್ಥೆಗಳು ಅವುಗಳ ದುಡಿಯುವ ಬಂಡವಾಳ/ ವ್ಯಾಪಾರ ವಹಿವಾಟು ಎಷ್ಟೇ ಇದ್ದರೂ 250/- ರೂ.ಗಳ ಕನಿಷ್ಟ ಲೆಕ್ಕಪರಿಶೋಧನಾ ಶುಲ್ಕವನ್ನು ಪಾವತಿಸತಕ್ಕದ್ದು.

1) ವಿದ್ಯಾರ್ಥಿಗಳ ಸಹಕಾರ ಸಂಘಗಳು.

2) ಸಂಪೂರ್ಣ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರು ಇರುವ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ಸಹಕಾರ ಸಂಘಗಳು.

3) ವೈದ್ಯಕೀಯ ನೆರವು ನೀಡುವ ಸಹಕಾರ ಸಂಘಗಳು.

4) ಪ್ರಾಥಮಿಕ ಮೀನುಗಾರರ ಸಹಕಾರ ಸಂಘಗಳು.
5) ಎಣ್ಣೆ ಗಾಣಗಳ ಸಹಕಾರ ಸಂಘಗಳು.
6) ಕುಂಬಾರರ ಸಹಕಾರ ಸಂಘಗಳು (ಮಡಿಕೆ ಮಾಡುವವರ)
7) ಚರ್ಮದ ಕೆಲಸಗಾರರ ಸಹಕಾರ ಸಂಘಗಳು
8) ಚಾಪೆ ನೇಯುವವರ ಸಹಕಾರ ಸಂಘಗಳು.
9) ಬುಟ್ಟಿ ಹೆಣೆಯುವವರ ಸಹಕಾರ ಸಂಘಗಳು.
10) ಅಕ್ಕಿ ಕೊಟ್ಟಣ ಸಹಕಾರ ಸಂಘಗಳು.
11) ಗುತ್ತಿಗೆ ಕಾರ್ಮಿಕರ ಸಹಕಾರ ಸಂಘಗಳು.
12) ಕ್ರೀಡಾ ಉತ್ತೇಜಕ ಸಹಕಾರ ಸಂಘಗಳು.
13) ಮಹಿಳಾ ಸಹಕಾರ ಸಂಘಗಳು (ಮಹಿಳಾ ಸಹಕಾರ ಬ್ಯಾಂಕುಗಳನ್ನು ಹೊರತುಪಡಿಸಿ)
14) ಮಾಜಿ ಸೈನಿಕರು ಸದಸ್ಯರಾಗಿದ್ದು ಅವರ ಏಳಿಗೆಗಾಗಿ ದುಡಿಯುತ್ತಿರುವ ಸಹಕಾರ ಸಂಘಗಳು.
15) ಸಹಕಾರ ಆಸ್ಪತ್ರೆಗಳು.
16) ದೋಬಿಗಳ ಸಹಕಾರ ಸಂಘಗಳು.
17) ಕಲ್ಲುಕುಟಿಕೆರೆ ಸಹಕಾರ ಸಂಘಗಳು.
18) ಕ್ಷೌರಿಕರ ಸಹಕಾರ ಸಂಘಗಳು.

v. ನಿಷ್ಕ್ರಿಯ/ ಸ್ಥಗಿತಗೊಂಡ ಸಹಕಾರ ಸಂಘಗಳಿಗೆ ಮತ್ತು ಸಮಾಪನಾ ಹಂತದಲ್ಲಿರುವ ಸಹಕಾರ ಸಂಘಗಳಿಗೆ ಲೆಕ್ಕಪರಿಶೋಧನಾ ಶುಲ್ಕ ಆಕರಣೆಯಿಂದ ವಿನಾಯಿತಿ ನೀಡಲಾಗಿದೆ.

**ವಿವರಣೆ:** ನಿಷ್ಕ್ರಿಯ/ ಸ್ಥಗಿತಗೊಂಡ ಸಂಘವೆಂದರೆ, ವರ್ಷದಲ್ಲಿ ಯಾವುದೇ ವ್ಯವಹಾರವನ್ನು ಕೈಗೊಂಡಿಲ್ಲದೇ ಇರುವ ಸಹಕಾರ ಸಂಘ ಎಂದು ಅರ್ಥೈಸತಕ್ಕದ್ದು.

4. ಸಮವರ್ತಿ ಹಾಗೂ ಅಂತಿಮ ಲೆಕ್ಕಪರಿಶೋಧನೆಗಾಗಿ ಸಹಕಾರ ಸಂಘಗಳು ಕರ್ನಾಟಕ ನಾಗರೀಕ ಸೇವಾ ನಿಯಮಗಳ, ನಿಯಮ 441 ರನ್ವಯ ಇಲಾಖೆ ಸಿಬ್ಬಂದಿಯನ್ನು ಪಡೆದು, ಆಡಳಿತಾತ್ಮಕ ಕಾರಣಗಳಿಗಾಗಿ ಆ ಸಂಸ್ಥೆಯ ಲೆಕ್ಕಪರಿಶೋಧನೆ ಪೂರೈಸಲು: ಸಹಾಯ ಮಾಡಲು ಕ್ಷೇತ್ರೀಯ ಸಿಬ್ಬಂದಿಯನ್ನು ನಿಯೋಜಿಸಿದಾಗ ಅಂತಹ ಸಂಸ್ಥೆಗಳು ಈ ಕೆಳಕಂಡಂತೆ ಲೆಕ್ಕಪರಿಶೋಧನಾ ವೆಚ್ಚವನ್ನು ಪಾವತಿಸತಕ್ಕದ್ದು.

i. ಸಂಸ್ಥೆಗೆ ಮಂಜೂರಾಗಿರುವ ಎಲ್ಲಾ ಹುದ್ದೆಗಳು ಖಾಲಿ ಇದ್ದು, ಲೆಕ್ಕಪರಿಶೋಧನೆಯನ್ನು ಕ್ಷೇತ್ರೀಯ ಸಿಬ್ಬಂದಿ ಕೈಗೊಂಡಾಗ ಸಂಸ್ಥೆಗೆ ಮಂಜೂರಾಗಿರುವ ಎಲ್ಲಾ ಹುದ್ದೆಗಳ ವಾರ್ಷಿಕ ವೆಚ್ಚದಲ್ಲಿ ಶೇಕಡಾ 50ರಷ್ಟು

ii. ಸಂಸ್ಥೆಗೆ ಮಂಜೂರಾಗಿರುವ ಕೆಲವು ಹುದ್ದೆಗಳು ಭರ್ತಿಯಾಗಿದ್ದು ಮತ್ತು ಕೆಲವು ಹುದ್ದೆಗಳು ಖಾಲಿ ಇದ್ದ ಸಂದರ್ಭದಲ್ಲಿ, ಕ್ಷೇತ್ರೀಯ ಸಿಬ್ಬಂದಿಯ ಸೇವೆಯನ್ನು ಒದಗಿಸಿದಾಗ, ಭರ್ತಿಯಾದ ಹುದ್ದೆಗಳ ವಾರ್ಷಿಕ ಲೆಕ್ಕಪರಿಶೋಧನಾ ವೆಚ್ಚದ ಜೊತೆಗೆ ಖಾಲಿ ಹುದ್ದೆಗಳ ವಾರ್ಷಿಕ ವೆಚ್ಚದ ಶೇಕಡಾ 50ರಷ್ಟು.

iii. ಸಂಸ್ಥೆಗೆ ಮಂಜೂರಾದ ಮತ್ತು ಭರ್ತಿಯಾದ ಹುದ್ದೆಗಳ ಜೊತೆಗೆ ಹೆಚ್ಚುವರಿಯಾಗಿ ಕ್ಷೇತ್ರೀಯ ಸಿಬ್ಬಂದಿಯನ್ನು ಒದಗಿಸಿದಾಗ ಲೆಕ್ಕಪರಿಶೋಧನಾ ವೆಚ್ಚವನ್ನು ದೈನಂದಿನ ಆಧಾರದ ಮೇಲೆ ವಸೂಲು ಮಾಡತಕ್ಕದ್ದು. ಅಂದರೆ, ಅಂತಹ ಲೆಕ್ಕಪರಿಶೋಧಕರು ಲೆಕ್ಕಪರಿಶೋಧನೆಗೆ ತೆಗೆದುಕೊಂಡ ಮಾನವ ದಿನಗಳಿಗನುಗುಣವಾಗಿ ಲೆಕ್ಕಾಚಾರ ಮಾಡತಕ್ಕದ್ದು.

ಇದರ ಜೊತೆಗೆ, ಮೇಲಿನ ಕ್ರಮ ಸಂಖ್ಯೆ: (i) (ii) ಮತ್ತು (iii) ಗಳಿಗೆ ಸಂಬಂಧಪಟ್ಟಂತೆ, ನಿಯೋಜಿಸಲ್ಪಟ್ಟ ಕ್ಷೇತ್ರೀಯ ಸಿಬ್ಬಂದಿಗೆ ತಗಲುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ವಾಸ್ತವಿಕ ಆಧಾರದ ಮೇಲೆ ಪಾವತಿಸತಕ್ಕದ್ದು.

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು, ಅಂತಹ ಸಹಕಾರ ಸಂಸ್ಥೆಯ ಲೆಕ್ಕಪರಿಶೋಧನೆಯನ್ನು ಪೂರೈಸಲು ಎಷ್ಟು ಸಿಬ್ಬಂದಿಯನ್ನು ಎಷ್ಟು ದಿನಗಳವರೆಗೆ ನಿಯೋಜಿಸಬೇಕೆಂಬುದರ ಬಗ್ಗೆ ನಿರ್ಧರಿಸುವವರು ಮತ್ತು ಲೆಕ್ಕಪರಿಶೋಧನಾ ವೆಚ್ಚದ ತಗಾದೆಯನ್ನು ಮಾಡುವರು. ಸದರಿ ಲೆಕ್ಕಪರಿಶೋಧನಾ ವೆಚ್ಚವನ್ನು ಅವಶ್ಯವಾಗಿ ಪಾವತಿಸಲು ಅಂತಹ ಸಹಕಾರ ಸಂಸ್ಥೆಯು ಬದ್ಧವಾಗಿರತಕ್ಕದ್ದು.

**5. ಸರ್ಕಾರವು ಲೆಕ್ಕಪರಿಶೋಧನಾ ಅಧಿಕಾರಿ:** ಸಿಬ್ಬಂದಿಯನ್ನು ಸಮವರ್ತಿ ಹಾಗೂ ಅಂತಿಮ ಲೆಕ್ಕಪರಿಶೋಧನೆಗಾಗಿ ಸರ್ಕಾರದಿಂದ ಸಹಕಾರ ಸಂಸ್ಥೆಗಳಿಗೆ ಅಥವಾ ಒಂದು ಸಹಕಾರ ಸಂಸ್ಥೆಯಿಂದ ಇನ್ನೊಂದು ಸಹಕಾರ ಸಂಸ್ಥೆಗೆ ಕರ್ನಾಟಕ ನಾಗರೀಕ ಸೇವಾ ನಿಯಮ 41 ರನ್ವಯ ವರ್ಗಾವಣೆ ಮಾಡಿ ಸ್ಥಳ ನಿಯುಕ್ತಿಗೊಳಿಸಿದಾಗ ಸದರಿ ಅಧಿಕಾರಿ: ಸಿಬ್ಬಂದಿಯವರ ವರ್ಗಾವಣಾ ಪ್ರಯಾಣ ಭತ್ಯೆ, ದಿನ ಭತ್ಯೆ ಮತ್ತು ಇತರೇ ಯಾವುದೇ ಕ್ಲೇಮುಗಳಿದ್ದರೂ ಬಿಡುಗಡೆಯಾದ ದಿನಾಂಕದಿಂದ ಸಂಸ್ಥೆಗೆ ಹಾಜರಾಗುವ ದಿನಾಂಕದವರೆಗೆ ನಿಯಮ 441 ರನ್ವಯ ಸೇವೆಯನ್ನು ಸ್ವೀಕರಿಸುವ ಸಹಕಾರ ಸಂಸ್ಥೆಯವರೇ ಭರಿಸತಕ್ಕದ್ದು.

6. ಸಹಕಾರ ಸಂಸ್ಥೆಯಲ್ಲಿನ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 441ರ ಎಲ್ಲಾ ಹುದ್ದೆಗಳು ರದ್ದಾಗಿ ನಂತರ ಮಂಜೂರಾದಲ್ಲಿ ಮಧ್ಯಂತರ ಅವಧಿಯಲ್ಲಿ ಕ್ಷೇತ್ರೀಯ ಸಿಬ್ಬಂದಿಯನ್ನು ನಿಯೋಜಿಸಿ ಸಮವರ್ತಿ ಹಾಗೂ ಅಂತಿಮ ಲೆಕ್ಕಪರಿಶೋಧನೆ ಪೂರೈಸಿದಾಗ ಅಂತಹ ಸಂಸ್ಥೆಗಳಲ್ಲಿ ನಿಯಮ 441 ರಡಿಯಲ್ಲಿ ಹುದ್ದೆಗಳು ಕಾರ್ಯನಿರ್ವಹಿಸುತ್ತಿಲ್ಲವೆಂದು ಪರಿಗಣಿಸಿ ಅಂತಹ ಮಧ್ಯಂತರ ಅವಧಿಯಲ್ಲಿ ಕೈಗೊಂಡ ಲೆಕ್ಕಪರಿಶೋಧನೆಗೆ ಕಂಡಿಕೆ (1)ರಂತೆ ಲೆಕ್ಕಪರಿಶೋಧನಾ ಶುಲ್ಕವನ್ನು ಆಕರಿಸತಕ್ಕದ್ದು.

7. ಕರ್ನಾಟಕ ನಾಗರೀಕ ಸೇವಾ ನಿಯಮಗಳ, ನಿಯಮ 441 ರಂತೆ ಲೆಕ್ಕಪರಿಶೋಧನಾ ವೆಚ್ಚ ಆಕರಣೆ ಸಂಬಂಧಿಸಿದಂತೆ ಈ ಆದೇಶದ ಕಂಡಿಕೆ 1, 2 ಮತ್ತು 3ರವರೆಗಿನ ಅವಕಾಶಗಳು ಅನ್ವಯಿಸುವುದಿಲ್ಲ.

8. ಈ ಆದೇಶದಂತೆ ಲೆಕ್ಕಪರಿಶೋಧನಾ ಶುಲ್ಕ:ವೆಚ್ಚ ಆಕರಣೆ ಮಾಡುವ ಸಂದರ್ಭದಲ್ಲಿ ತೊಡಕು ಉಂಟಾದಲ್ಲಿ ಆ ಬಗ್ಗೆ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ತೀರ್ಮಾನವು ಅಂತಿಮ ಹಾಗೂ ಅವಶ್ಯಪಾಲನಿಯವಾಗಿರುತ್ತದೆ.

9. ಈ ಆದೇಶದಲ್ಲಿ ನಿಗದಿಪಡಿಸಿದ ಲೆಕ್ಕಪರಿಶೋಧನಾ ಶುಲ್ಕ/ ಲೆಕ್ಕಪರಿಶೋಧನಾ ವೆಚ್ಚದ ಅನುಸಾರ ಉಪ ವಿಭಾಗೀಯ ಸಹಾಯಕ ನಿರ್ದೇಶಕರುಗಳು, ಸಂಬಂಧಿಸಿದ ಲೆಕ್ಕಪರಿಶೋಧನಾ ಶುಲ್ಕ/ ವೆಚ್ಚವನ್ನು ಆಕರಣೆ ಮಾಡಿ ಸಹಕಾರ ಸಂಘಗಳಿಂದ ವಸೂಲಿ ಮಾಡುವ ಪ್ರಾಧಿಕಾರವುಳ್ಳವರಾಗಿರುತ್ತಾರೆ.

10. ಈ ಮೇಲಿನ ಆದೇಶವು ದಿನಾಂಕ: 02.10.2004ರಿಂದ ಜಾರಿಗೆ ಬರುವುದು ಹಾಗೂ ಆ ದಿನಾಂಕದಂದು ಯಾವುದೇ ವರ್ಷದ ಪ್ರಗತಿಯಲ್ಲಿಟ್ಟಿರುವ: ಬಾಕಿಯಿರುವ ಲೆಕ್ಕಪರಿಶೋಧನೆ ಸೇರಿದಂತೆ ಎಲ್ಲಾ ಸಾಲುಗಳ ಲೆಕ್ಕಪರಿಶೋಧನೆಗೆ ಅನ್ವಯವಾಗುತ್ತದೆ.

11. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ:99:ಸಿಎಲ್‌ಎಂ:2002, ದಿನಾಂಕ: 27.09.2004ರನ್ವಯ ಸರ್ಕಾರದ ಪೂರ್ವ ಅನುಮೋದನೆಯೊಂದಿಗೆ ಹೊರಡಿಸಿದೆ.

**ಟಿ.ಎ. ಪಾರ್ಥಸಾರಥಿ**

ಪಿ.ಆರ್. 1691

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

### ಅಧಿಸೂಚನೆ ಕ್ರಮಾಂಕ: ಗ್ರಾಪಂ/ಚು/ವಿವ/40/2004-05, ದಿನಾಂಕ: 16ನೇ ನವೆಂಬರ್ 2004

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 4 ಉಪ ಪ್ರಕರಣ (1) ರನ್ವಯ 1991ರ ಜನಗಣತಿಯ ಆಧಾರದ ಮೇಲೆ ಗ್ರಾಮದಲ್ಲಿ ಅಥವಾ ಗ್ರಾಮಗಳ ಗುಂಪು ಒಳಗೊಂಡಿರುವ ಪ್ರದೇಶವು 2001ನೇ ಜನಗಣತಿಯನ್ವಯ ಗ್ರಾಮದ ಜನಸಂಖ್ಯೆಯ ಬದಲಾವಣೆ ಆಗುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 41 ಗ್ರಾಪಸ 2004 ದಿನಾಂಕ: 7.10.2004 ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993 ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಬಿ. ದ್ಯಾಬೇರಿ ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಮಧುಗಿರಿ ತಾಲ್ಲೂಕಿಗೆ ಸಂಬಂಧಿಸಿದಂತೆ ಹಾಲಿ ಅಸ್ತಿತ್ವದಲ್ಲಿರುವ ಒಟ್ಟು ಗ್ರಾಮಪಂಚಾಯಿತಿಗಳಲ್ಲಿ 5000 ಕ್ಕಿಂತ ಕಡಿಮೆ ಜನಸಂಖ್ಯೆ ಇರುವ 03 ಮತ್ತು 7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ 08 ಗ್ರಾಮಪಂಚಾಯಿತಿಗಳಲ್ಲಿ ಸಂಖ್ಯೆ/ ಗಡಿ (ಬೌಂಡರಿ) ಗಳಲ್ಲಿ ಯಾವುದೇ ರೀತಿ ಬದಲಾವಣೆ ಮಾಡದೆ ಈ ಕೆಳಕಂಡ ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿರುವ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಪ್ರದೇಶವೆಂದು ಘೋಷಿಸುತ್ತಾ, ಅದರ ಕೇಂದ್ರಸ್ಥಾನವನ್ನು ಅದಕ್ಕೆ ಸಂಬಂಧಿಸಿದ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿರುವುದಾಗಿರುತ್ತದೆಂದು ಘೋಷಿಸಿರುತ್ತೇನೆ.

**ಅನುಬಂಧ**

| ಕ್ರ. ಸಂ. | ಗ್ರಾಮಪಂಚಾಯಿತಿ ಕೇಂದ್ರ ಸ್ಥಾನ | ಗ್ರಾಮಪಂಚಾಯಿತಿಯಾಗಿ ನಿಯೋಜಿಸಿ ಘೋಷಿಸಲಾಗಿರುವ ಗ್ರಾಮ / ಗ್ರಾಮಗಳ ಸಮೂಹ | | | |
|---|---|---|---|---|---|
| 1 | 2 | 3 | | | |
| **5000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | | |
| 1. | 37-ರಂಟವಳಲು | 1. | ರಂಟವಳಲು | 2. | ಚಂಬೇನಹಳ್ಳಿ |
| | | 3. | ಪುಲಮಘಟ್ಟ | 4. | ಕೋಡಿರಾಂಪುರ |
| | | 5. | ಕೆಂಪಚಿನ್ನೇನಹಳ್ಳಿ | 6. | ಮಂಡತಿಮ್ಮನಹಳ್ಳಿ |
| | | 7. | ಜೀವಗೊಂಡನಹಳ್ಳಿ | 8. | ಮಾಯಗೊಂಡನಹಳ್ಳಿ |
| | | 9. | ಬಡೋಬನಹಳ್ಳಿ | 10. | ಕೆ. ಗೊಲ್ಲಹಳ್ಳಿ |
| 2. | 38-ಕೊಟಗಾರ್ಲಹಳ್ಳಿ | 1. | ಕೊಟಗಾರ್ಲಹಳ್ಳಿ | 2. | ಬೋರಮುತ್ತನಹಳ್ಳಿ |
| | | 3. | ವಿಠಲಾಪುರ | | |
| 3. | 39-ದಬ್ಬೇಘಟ್ಟ | 1. | ದಬ್ಬೇಘಟ್ಟ | 2. | ತೊಣಚಗೊಂಡನಹಳ್ಳಿ |
| | | 3. | ಕುರುಬರಹಳ್ಳಿ | 4. | ಬಿಟ್ಟನಕುರಿಕೆ |
| | | 5. | ಹರಿಹರಪುರ | 6. | ಎಸ್.ಎಂ. ಗೊಲ್ಲಹಳ್ಳಿ |
| **7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | | |
| 4. | 3-ದೊಡ್ಡವೀರಗೊಂಡನಹಳ್ಳಿ | 1. | ದೊಡ್ಡವೀರಗೊಂಡನಹಳ್ಳಿ | 2. | ಹೊಸಹಳ್ಳಿ |
| | | 3. | ಕುಪ್ಪಾಚಾರಿ ರೊಪ್ಪ | 4. | ಗುರಮ್ಮನಕಟ್ಟೆ |
| | | 5. | ಸೋಮಲಾಪುರ | 6. | ತುಂಗೋಟಿ |
| | | 7. | ತಾಯಗೊಂಡನಹಳ್ಳಿ | 8. | ಚಿಕ್ಕೇಗೌಡನರೊಪ್ಪ |
| | | 9. | ಗುಂಡ್ಲಹಳ್ಳಿ | 10. | ಚಿಕ್ಕವೀರಗೊಂಡನಹಳ್ಳಿ |
| | | 11. | ಆಚೇನಹಳ್ಳಿ | 12. | ರಂಗನಾಯಕನರೊಪ್ಪ |
| | | 13. | ಕಂಬದಹಳ್ಳಿ | 14. | ಮದಲೇರಹಳ್ಳಿ |
| | | 15. | ವಜ್ರದಹಳ್ಳಿ | 16. | ಬೆಲ್ಲದಮಡು |
| 5. | 13-ರೆಡ್ಡಿಹಳ್ಳಿ | 1. | ರೆಡ್ಡಿಹಳ್ಳಿ | 2. | ಕಸಾಪುರ |
| | | 3. | ಆರ್. ಗೊಲ್ಲಹಳ್ಳಿ | 4. | ಮಲ್ಲನಾಯಕನಹಳ್ಳಿ ಕಾವಲ್ |
| | | 5. | ಮಲ್ಲನಾಯಕನಹಳ್ಳಿ | 6. | ಲಕ್ಷ್ಮೀಪುರ |
| | | 7. | ಅಯ್ಯನಹಳ್ಳಿ | 8. | ಸತ್ತಿಗೇನಹಳ್ಳಿ |
| 6. | 15-ಹೊಸಕೆರೆ | 1. | ಹೊಸಕೆರೆ | 2. | ಗಾಳಿಹಳ್ಳಿ |
| | | 3. | ಬಸವನಹಳ್ಳಿ | 4. | ಆವರಗಲ್ಲು |
| | | 5. | ಲಕ್ಷ್ಮೀದೇವಿಪುರ | 6. | ಕಾರೇನಹಳ್ಳಿ |
| 7. | 18-ಮುದ್ದೇನಹಳ್ಳಿ | 1. | ಮುದ್ದೇನಹಳ್ಳಿ | 2. | ಸುದ್ದೆಕುಂಟೆ |
| | | 3. | ವರದನಹಳ್ಳಿ | 4. | ಪೋಲೇನಹಳ್ಳಿ |
| | | 5. | ಕಸಿನಾಯಕನಹಳ್ಳಿ | 6. | ವೆಂಗಳಮ್ಮನಹಳ್ಳಿ |
| | | 7. | ತೆರಿಯೂರು | | |
| 8. | 21-ಕೊಡಿಗೇನಹಳ್ಳಿ | 1. | ಕೊಡಿಗೇನಹಳ್ಳಿ | 2. | ಜಾಲಿಹಳ್ಳಿ |
| | | 3. | ಗುಟ್ಟೆ | | |
| 9. | 31-ಬಡವನಹಳ್ಳಿ | 1. | ಬಡವನಹಳ್ಳಿ | 2. | ಲಿಂಗಸಂದ್ರ |
| | | 3. | ವೆಂಕಟೇಶಪುರ | 4. | ಸಿಡಿದರಗಲ್ಲು |

| 1 | 2 | 3 | | | |
|---|---|---|---|---|---|
| | 31-ಬಡವನಹಳ್ಳಿ | 5. | ಕೃಷ್ಣಾಪುರ | 6. | ಆಪನಹಳ್ಳಿ |
| | | 7. | ಕನಪನಾಯಕನಹಳ್ಳಿ | 8. | ತಿಪ್ಪನಹಳ್ಳಿ |
| | | 9. | ನಾಗೇನಹಳ್ಳಿ | | |
| 10. | 33-ಸಜ್ಜೇಹೊಸಹಳ್ಳಿ | 1. | ಸಜ್ಜೆಹೊಸಹಳ್ಳಿ | 2. | ಶಿವನಗೆರೆ |
| | | 3. | ಬಸ್ಮಂಗಿಕಾವಲ್ | 4. | ಬಸವನಹಳ್ಳಿ |
| | | 5. | ಕಾರ್ಪೇನಹಳ್ಳಿ | 6. | ಸಿಂಗ್ರಾವತನಹಳ್ಳಿ |
| | | 7. | ಕಿತ್ತಗಳಿ | 8. | ಕಾರೇನಹಳ್ಳಿ |
| 11. | 34-ಕವಣದಾಲ | 1. | ಕವಣದಾಲ | 2. | ಬೊಮ್ಮೇತಿಮ್ಮನಹಳ್ಳಿ |
| | | 3. | ಚಿಕ್ಕತಿಮ್ಮನಹಳ್ಳಿ | 4. | ಬಿಸಾಡಿ ಕರಿಯನಪಾಳ್ಯ |
| | | 5. | ಕುರಂಕೋಟೆ ತಿಮ್ಮನಪಾಳ್ಯ | 6. | ಕುಣಿಗಲ್ ತಿಮ್ಮನಹಳ್ಳಿ |
| | | 7. | ಕತ್ತಿಜೋಗಿಪಾಳ್ಯ | 8. | ಶೀಬನಯ್ಯನಪಾಳ್ಯ |
| | | 9. | ಅಂಗಡಿ ತಿಮ್ಮನ ಪಾಳ್ಯ | 10. | ಭೂಬಲಗುಟ್ಟೆ |
| | | 11. | ರಂಗನಪಾಳ್ಯ | 12. | ಹನುಮನಹಳ್ಳಿ |
| | | 13. | ಗೊದ್ದನಪಾಳ್ಯ | 14. | ಮುದ್ದಪ್ಪನಪಾಳ್ಯ |
| | | 15. | ಮಾದೇನಹಳ್ಳಿ | 16. | ಪೂಜಾರಹಳ್ಳಿ |
| | | 17. | ಓಬಳಿಹಳ್ಳಿ | | |

**ಎಂ.ಬಿ. ದ್ಯಾಬೇರಿ**

ಪಿ.ಆರ್. 1601 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

**ಅಧಿಸೂಚನೆ ಕ್ರಮಾಂಕ: ಗ್ರಾಪಂ/ಚು/ವಿವ/41/2004-05, ದಿನಾಂಕ: 16ನೇ ನವೆಂಬರ್ 2004**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 4 ಉಪ ಪ್ರಕರಣ (1) ರನ್ವಯ 1991ರ ಜನಗಣತಿಯ ಆಧಾರದ ಮೇಲೆ ಗ್ರಾಮದಲ್ಲಿ ಅಥವಾ ಗ್ರಾಮಗಳ ಗುಂಪು ಒಳಗೊಂಡಿರುವ ಪ್ರದೇಶವು 2001ನೇ ಜನಗಣತಿಯನ್ವಯ ಗ್ರಾಮದ ಜನಸಂಖ್ಯೆಯ ಬದಲಾವಣೆ ಆಗುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 41 ಗ್ರಾಪಸ 2004 ದಿನಾಂಕ: 7.10.2004 ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993 ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಬಿ. ದ್ಯಾಬೇರಿ ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕೊರಟಗೆರೆ ತಾಲ್ಲೂಕಿಗೆ ಸಂಬಂಧಿಸಿದಂತೆ ಹಾಲಿ ಅಸ್ತಿತ್ವದಲ್ಲಿರುವ ಒಟ್ಟು ಗ್ರಾಮಪಂಚಾಯಿತಿಗಳಲ್ಲಿ 7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ 4 ಗ್ರಾಮಪಂಚಾಯಿತಿಗಳಲ್ಲಿ ಸಂಖ್ಯೆ/ ಗಡಿ (ಬೌಂಡರಿ) ಗಳಲ್ಲಿ ಯಾವುದೇ ರೀತಿ ಬದಲಾವಣೆ ಮಾಡದೆ ಈ ಕೆಳಕಂಡ ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿರುವ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಪ್ರದೇಶವೆಂದು ಘೋಷಿಸುತ್ತಾ, ಅದರ ಕೇಂದ್ರಸ್ಥಾನವನ್ನು ಅದಕ್ಕೆ ಸಂಬಂಧಿಸಿದ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿರುವುದಾಗಿರುತ್ತದೆಂದು ಘೋಷಿಸಿರುತ್ತೇನೆ.

**ಅನುಬಂಧ**

| ಕ್ರ. ಸಂ. | ಗ್ರಾಮಪಂಚಾಯಿತಿ ಕೇಂದ್ರ ಸ್ಥಾನ | ಗ್ರಾಮಪಂಚಾಯಿತಿಯಾಗಿ ನಿಯೋಜಿಸಿ ಘೋಷಿಸಲಾಗಿರುವ ಗ್ರಾಮ / ಗ್ರಾಮಗಳ ಸಮೂಹ | | | |
|---|---|---|---|---|---|
| 1 | 2 | 3 | | | |
| **7000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | | |
| 1. | 1-ತೋವಿನಕೆರೆ | 1. | ತೋವಿನಕೆರೆ | 2. | ಮುದಿಗೌಡನಹಳ್ಳಿ |
| | | 3. | ಕುರಿಹಳ್ಳಿ | 4. | ಕಬ್ಬಿಗೆರೆ |
| | | 5. | ಬಿಸಾಡಿಹಳ್ಳಿ | 6. | ದೊಡ್ಡಸಂಜೀವೇಗೌಡನ ಪಾಳ್ಯ |
| | | 7. | ಸೂರೇನಹಳ್ಳಿ | 8. | ಉಗ್ರನಹಳ್ಳಿ (ಬೇ) |
| | | 9. | ಚಿಕ್ಕರಸನಹಳ್ಳಿ | 10. | ಅಜ್ಜೇನಹಳ್ಳಿ |
| | | 11. | ಓಬನಹಳ್ಳಿ | 12. | ಚಿಕ್ಕಣ್ಣನಹಳ್ಳಿ |
| | | 13. | ಬಡಮುದ್ದನಪಾಳ್ಯ | 14. | ದೊಡ್ಡೇಗೌಡನಪಾಳ್ಯ |
| | | 15. | ಚಿಕ್ಕಸಂಜೀವೇಗೌಡನ ಪಾಳ್ಯ | 16. | ದೇವರಹಳ್ಳಿ |
| | | 17. | ವೆಂಕಟರಮಣನಹಳ್ಳಿ | 18. | ಕಣಿವೇ ಹೊಸಹಳ್ಳಿ (ಬೇ) |
| 2. | 2-ಬೂದಗವಿ (ಸಿದ್ಧರಬೆಟ್ಟ) | 1. | ಬೂದಗವಿ | 2. | ಗಟ್ಟಿತಿಮ್ಮನಹಳ್ಳಿ |
| | | 3. | ಮರೇನಾಯಕನಹಳ್ಳಿ | 4. | ನೇಗಲಾಲ |
| | | 5. | ಬೆಂಡೋಣೆ | 6. | ಕುಮಟೇನಹಳ್ಳಿ |
| | | 7. | ಗೌಜಗಲ್ಲು | 8. | ಹಂಚಿಮಲ್ಲನಹಳ್ಳಿ |
| | | 9. | ಮಲ್ಲೇಕಾವು | 10. | ದೊಡ್ಡತಿಮ್ಮನಹಳ್ಳಿ (ಬೇ) |
| | | 11. | ಗೌರಿಕಲ್ಲು | 12. | ಚನ್ನರಾಯನದುರ್ಗ |
| | | 13. | ದೊಗ್ಗನಹಳ್ಳಿ | | |

| 1 | 2 | 3 | | | |
|---|---|---|---|---|---|
| 3. | 9-ಬೈಚಾಪುರ | 1. | ಬೈಚಾಪುರ | 2. | ರಾಯವಾರ |
| | | 3. | ಚಿಕ್ಕನಹಳ್ಳಿ | 4. | ಬುಡ್ಡೇನಹಳ್ಳಿ |
| | | 5. | ಗೊಡ್ರಹಳ್ಳಿ | 6. | ಕ್ಯಾಶವಾರ |
| | | 7. | ರೆಡ್ಡಿಹಳ್ಳಿ | 8. | ಹನುಮೇನಹಳ್ಳಿ |
| 4. | 19-ನೀಲಗೊಂಡನಹಳ್ಳಿ | 1. | ನೀಲಗೊಂಡನಹಳ್ಳಿ | 2. | ಸಂಕೇನಹಳ್ಳಿ |
| | | 3. | ಹುಳಸೊಪ್ಪನಹಳ್ಳಿ | 4. | ಚಿಕ್ಕಪಾಲನಹಳ್ಳಿ |
| | | 5. | ದೊಡ್ಡಪಾಲನಹಳ್ಳಿ | 6. | ಹೊನ್ನೇನಹಳ್ಳಿ |
| | | 7. | ಹೊಸಕೋಟೆ | 8. | ಎ. ವೆಂಕಟಾಪುರ |
| | | 9. | ಮಣ್ಣೂರು ತಿಮ್ಮನಹಳ್ಳಿ | | |

**ಎಂ.ಬಿ. ದ್ಯಾಬೇರಿ**

ಪಿ.ಆರ್. 1602 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

**ಅಧಿಸೂಚನೆ ಕ್ರಮಾಂಕ: ಗ್ರಾಪಂ/ಚು/ವಿವ/42/2004-05, ದಿನಾಂಕ: 16ನೇ ನವೆಂಬರ್ 2004**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 4 ಉಪ ಪ್ರಕರಣ (1) ರನ್ವಯ 1991ರ ಜನಗಣತಿಯ ಆಧಾರದ ಮೇಲೆ ಗ್ರಾಮದಲ್ಲಿ ಅಥವಾ ಗ್ರಾಮಗಳ ಗುಂಪು ಒಳಗೊಂಡಿರುವ ಪ್ರದೇಶವು 2001ನೇ ಜನಗಣತಿಯನ್ವಯ ಗ್ರಾಮದ ಜನಸಂಖ್ಯೆಯ ಬದಲಾವಣೆ ಆಗುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 41 ಗ್ರಾಪಸ 2004 ದಿನಾಂಕ: 7.10.2004 ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993 ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಬಿ. ದ್ಯಾಬೇರಿ ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಶಿರಾ ತಾಲ್ಲೂಕಿಗೆ ಸಂಬಂಧಿಸಿದಂತೆ ಹಾಲಿ ಅಸ್ತಿತ್ವದಲ್ಲಿರುವ ಒಟ್ಟು ಗ್ರಾಮಪಂಚಾಯಿತಿಗಳಲ್ಲಿ 7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ 17 ಗ್ರಾಮಪಂಚಾಯಿತಿಗಳಲ್ಲಿ ಸಂಖ್ಯೆ/ ಗಡಿ (ಬೌಂಡರಿ) ಗಳಲ್ಲಿ ಯಾವುದೇ ರೀತಿ ಬದಲಾವಣೆ ಮಾಡದೆ ಈ ಕೆಳಕಂಡ ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿರುವ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಪ್ರದೇಶವೆಂದು ಘೋಷಿಸುತ್ತಾ, ಅದರ ಕೇಂದ್ರಸ್ಥಾನವನ್ನು ಅದಕ್ಕೆ ಸಂಬಂಧಿಸಿದ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿರುವುದಾಗಿರುತ್ತದೆಂದು ಘೋಷಿಸಿರುತ್ತೇನೆ.

**ಅನುಬಂಧ**

| ಕ್ರ. ಸಂ. | ಗ್ರಾಮಪಂಚಾಯಿತಿ ಕೇಂದ್ರ ಸ್ಥಾನ | ಗ್ರಾಮಪಂಚಾಯಿತಿಯಾಗಿ ನಿಯೋಜಿಸಿ ಘೋಷಿಸಲಾಗಿರುವ ಗ್ರಾಮ / ಗ್ರಾಮಗಳ ಸಮೂಹ | | | |
|---|---|---|---|---|---|
| **7000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | | |
| 1. | ಹುಲಿಕುಂಟೆ | 1. | ಹುಲಿಕುಂಟೆ | 2. | ಚಿಕ್ಕಹುಲಿಕುಂಟೆ |
| | | 3. | ಯಂಜಲಗೆರೆ | 4. | ಕೊಟ್ಟ |
| | | 5. | ನಿಡಗಟ್ಟೆ | 6. | ಬಡೇನಹಳ್ಳಿ |
| 2. | 6-ಬರಗೂರು | 1. | ಬರಗೂರು | 2. | ನರಸೀಪುರ (ಬೇ) |
| | | 3. | ಹಾರೋಗೆರೆ | 4. | ಯಲಪೇನಹಳ್ಳಿ |
| | | 5. | ರಂಗಾಪುರ | 6. | ಕದಿರೇಹಳ್ಳಿ |
| | | 7. | ಕಾಟನಹಳ್ಳಿ | 8. | ಕಲಿಗೋನಹಳ್ಳಿ |
| | | 9. | ದಾಸರಹಳ್ಳಿ | | |
| 3. | 7-ಹಂದಿಕುಂಟೆ | 1. | ಹಂದಿಕುಂಟೆ | 2. | ಅಗ್ರಹಾರ |
| | | 3. | ಬಡಮಾರನಹಳ್ಳಿ | 4. | ಕರೇಕ್ಯಾತನಹಳ್ಳಿ |
| | | 5. | ಕಲ್ಲಹಳ್ಳಿ | 6. | ಹರಿಯಜ್ಜಿಹಳ್ಳಿ |
| | | 7. | ರಾಗಲಹಳ್ಳಿ | 8. | ಪೂಜಾರ್ ಮುದ್ದನಹಳ್ಳಿ |
| 4. | 8-ಬೇವಿನಹಳ್ಳಿ | 1. | ಬೇವಿನಹಳ್ಳಿ | 2. | ಚಂಗಾವರ |
| | | 3. | ಸಿದ್ಧಾಪುರ | | |
| 5. | 10-ಹೆಂದೊರೆ | 1. | ಹೆಂದೊರೆ | 2. | ಕಾಮಗೊಂಡನಹಳ್ಳಿ |
| 6. | 14-ಗೌಡಗೆರೆ | 1. | ಗೌಡಗೆರೆ | 2. | ಕಗ್ಗಲಡು |
| | | 3. | ಬಡಕನಹಳ್ಳಿ | 4. | ಮದ್ದಕ್ಕನಹಳ್ಳಿ |
| | | 5. | ಗೋಮಾರನಹಳ್ಳಿ | 6. | ಹೊಸಹಳ್ಳಿ |
| | | 7. | ಹೊನ್ನೇನಹಳ್ಳಿ | 8. | ಭೂತಕಾಟನಹಳ್ಳಿ |
| | | 9. | ಬಾಲೇನಹಳ್ಳಿ | | |
| 7. | 15-ಬುಕ್ಕಾಪಟ್ಟಣ | 1. | ಬುಕ್ಕಾಪಟ್ಟಣ | 2. | ಬಾಳಾಪುರ |
| | | 3. | ಹೊಸಹಳ್ಳಿ | 4. | ಪುರ |

| 1 | 2 | 3 | | | |
|---|---|---|---|---|---|
| 8. | 16-ರಾಮಲಿಂಗಾಪುರ | 1. | ರಾಮಲಿಂಗಾಪುರ | 2. | ಮುದ್ದಪ್ಪನಹಳ್ಳಿ |
| | | 3. | ಮಾದೇನಹಳ್ಳಿ | 4. | ಕರೇಮಾದೇನಹಳ್ಳಿ |
| | | 5. | ಸಾಳಾಪುರ | 6. | ಜಾನಕಲ್ಲು |
| | | 7. | ಬಸವನಹಳ್ಳಿ | 8. | ಸಾಕ್ಷಿಹಳ್ಳಿ |
| | | 9. | ತುಪ್ಪದಕೋಣ | 10. | ಮಾರಗೊಂಡನಹಳ್ಳಿ |
| | | 11. | ಕುಂಬಾರಹಳ್ಳಿ | | |
| 9. | 17-ಹುಯಿಲದೊರೆ | 1. | ಹುಯಿಲದೊರೆ | 2. | ಹುಯಿಲದೊರೆ ಕಾವಲ್ |
| | | 3. | ರಂಗನಹಳ್ಳಿ | 4. | ಗುಡ್ಡದ ರಂಗನಹಳ್ಳಿ |
| | | 5. | ಹೊನ್ನೇನಹಳ್ಳಿ | 6. | ಗಿಡ್ಡನಹಳ್ಳಿ |
| | | 7. | ದೊಡ್ಡ ಆಲದಮಡು | 8. | ಮಂಗನಹಳ್ಳಿ |
| | | 9. | ಕಿಲಾರದಹಳ್ಳಿ | 10. | ಸಾದರಕರೇನಹಳ್ಳಿ |
| | | 11. | ಶಾಖದಡು | | |
| 10. | 18-ನೇರಳೆಗುಡ್ಡ | 1. | ನೇರಳೆಗುಡ್ಡ | 2. | ಗುಂಗುರಪೆಂಟೆ |
| | | 3. | ಅಜ್ಜೇನಹಳ್ಳಿ | 4. | ರಾಮನಹಳ್ಳಿ |
| | | 5. | ಗಾಣದಹುಣಸೆ | 6. | ಯರದಕಟ್ಟೆ |
| | | 7. | ಕುರುಬರಹಳ್ಳಿ | 8. | ಹುಣಸೆಕಟ್ಟೆ |
| | | 9. | ಲಿಂಗಶೆಟ್ಟಿಹಳ್ಳಿ | 10. | ಸೂಲದಾಳು |
| | | 11. | ಕಂಬದಹಳ್ಳಿ | 12. | ವೆಂಕಟಾಪುರ |
| | | 13. | ಬೋರನಹಾಳು | 14. | ಬೂದಿಗುಡ್ಡಕಾವಲ್ |
| | | 15. | ಮರಿದಾಸರಹಳ್ಳಿ | 16. | ಜಾಡರಹಳ್ಳಿ |
| | | 17. | ಚಿಕ್ಕೇನಹಳ್ಳಿ | 18. | ಚನ್ನೇನಹಳ್ಳಿ |
| | | 19. | ತಿಮ್ಮನಹಳ್ಳಿ | | |
| 11. | 21-ಕಳ್ಳಂಬೆಳ್ಳ | 1. | ಕಳ್ಳಂಬೆಳ್ಳ | 2. | ಹಾಲೇನಹಳ್ಳಿ |
| 12. | 22-ಭೂಪಸಂದ್ರ | 1. | ಭೂಪಸಂದ್ರ | 2. | ಮಾಯಸಂದ್ರ |
| | | 3. | ಕಾಳಾಪುರ | 4. | ಮಾಟನಹಳ್ಳಿ |
| | | 5. | ದೊಡ್ಡಚಿಕ್ಕನಹಳ್ಳಿ | 6. | ಹೊನ್ನೇನಹಳ್ಳಿ |
| | | 7. | ತಾಳಗುಂದ | 8. | ಚಿಕ್ಕತಿಮ್ಮನಹಳ್ಳಿ |
| | | 9. | ಶಿರಾದಡು | 10. | ಬೆಟ್ಟನಹಳ್ಳಿ |
| | | 11. | ಮುಚ್ಚವೀರನಹಳ್ಳಿ | 12. | ಚನ್ನೇನಹಳ್ಳಿ |
| | | 13. | ಭೈರಾಪುರ | 14. | ದೇವರಹಳ್ಳಿ |
| | | 15. | ಚಿನ್ನಪ್ಪನಹಳ್ಳಿ | | |
| 13. | 29-ಲಕ್ಷ್ಮೀಸಾಗರ | 1. | ಲಕ್ಷ್ಮೀಸಾಗರ | 2. | ದೇವರಪುರ |
| | | 3. | ರಂಗನಹಳ್ಳಿ | 4. | ಚೀಲನಹಳ್ಳಿ |
| | | 5. | ಪಂಜಿಗನಹಳ್ಳಿ | 6. | ದ್ವಾರಾಳು |
| | | 7. | ಸೋರೆಕುಂಟೆ | 8. | ದೇವರಹಳ್ಳಿ |
| | | 9. | ಗಜ್ಜಿಗರಹಳ್ಳಿ | | |
| 14. | 30-ಮೇಲ್ಕುಂಟೆ | 1. | ಮೇಲ್ಕುಂಟೆ | 2. | ಗೊಲ್ಲಹಳ್ಳಿ |
| | | 3. | ಹನುಮನಹಳ್ಳಿ | 4. | ಬಂದಕುಂಟೆ |
| 15. | 31-ಕೊಟ್ಟ | 1. | ಕೊಟ್ಟ | 2. | ಜಕ್ಕನಕೋಟೆ |
| | | 3. | ಓಜುಗುಂಟೆ | 4. | ಬಿದರೆಕೆರೆ |
| 16. | 34-ಮಾಗೋಡು | 1. | ಮಾಗೋಡು | 2. | ಗಿರಿನಾಥನಹಳ್ಳಿ |
| | | 3. | ಹಲ್ಕೂರು | 4. | ಹಲ್ಕೂರು ಕಾವಲ್ |
| | | 5. | ಗುಳಿಗೇನಹಳ್ಳಿ | 6. | ಬೋರಸಂದ್ರ |
| 17. | 36-ಯಲಿಯೂರು | 1. | ಯಲಿಯೂರು | 2. | ಎಮ್ಮೇರಹಳ್ಳಿ |
| | | 3. | ದೊಡ್ಡಗುಳ | 4. | ಅರೇಹಳ್ಳಿ |
| | | 5. | ಪದ್ಮಾಪುರ | 6. | ತಗ್ಗಿಹಳ್ಳಿ |
| | | 7. | ಗುಮ್ಮನಹಳ್ಳಿ | 8. | ಕಾಟನಹಳ್ಳಿ |

ಎಂ.ಬಿ. ದ್ಯಾಬೇರಿ

ಪಿ.ಆರ್. 1603 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

### ಅಧಿಸೂಚನೆ ಕ್ರಮಾಂಕ: ಗ್ರಾಪಂ/ಚು/ವಿವ/43/2004-05, ದಿನಾಂಕ: 16ನೇ ನವೆಂಬರ್ 2004

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 4 ಉಪ ಪ್ರಕರಣ (1) ರನ್ವಯ 1991ರ ಜನಗಣತಿಯ ಆಧಾರದ ಮೇಲೆ ಗ್ರಾಮದಲ್ಲಿ ಅಥವಾ ಗ್ರಾಮಗಳ ಗುಂಪು ಒಳಗೊಂಡಿರುವ ಪ್ರದೇಶವು 2001ನೇ ಜನಗಣತಿಯನ್ವಯ ಗ್ರಾಮದ ಜನಸಂಖ್ಯೆಯ ಬದಲಾವಣೆ ಆಗುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 41 ಗ್ರಾಪಸ 2004 ದಿನಾಂಕ: 7.10.2004 ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993 ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಬಿ. ದ್ಯಾಬೇರಿ ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಪಾವಗಡ ತಾಲ್ಲೂಕಿಗೆ ಸಂಬಂಧಿಸಿದಂತೆ ಹಾಲಿ ಅಸ್ತಿತ್ವದಲ್ಲಿರುವ ಒಟ್ಟು ಗ್ರಾಮಪಂಚಾಯಿತಿಗಳಲ್ಲಿ 5000 ಕ್ಕಿಂತ ಕಡಿಮೆ ಜನಸಂಖ್ಯೆ ಇರುವ 04 ಮತ್ತು 7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ 07 ಗ್ರಾಮಪಂಚಾಯಿತಿಗಳಲ್ಲಿ ಸಂಖ್ಯೆ/ ಗಡಿ (ಬೌಂಡರಿ) ಗಳಲ್ಲಿ ಯಾವುದೇ ರೀತಿ ಬದಲಾವಣೆ ಮಾಡದೆ ಈ ಕೆಳಕಂಡ ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿರುವ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಪ್ರದೇಶವೆಂದು ಘೋಷಿಸುತ್ತಾ, ಅದರ ಕೇಂದ್ರಸ್ಥಾನವನ್ನು ಅದಕ್ಕೆ ಸಂಬಂಧಿಸಿದ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿರುವುದಾಗಿರುತ್ತದೆಂದು ಘೋಷಿಸಿರುತ್ತೇನೆ.

**ಅನುಬಂಧ**

| ಕ್ರ. ಸಂ. | ಗ್ರಾಮಪಂಚಾಯಿತಿ ಕೇಂದ್ರ ಸ್ಥಾನ | ಗ್ರಾಮಪಂಚಾಯಿತಿಯಾಗಿ ನಿಯೋಜಿಸಿ ಘೋಷಿಸಲಾಗಿರುವ ಗ್ರಾಮ / ಗ್ರಾಮಗಳ ಸಮೂಹ | | | |
|---|---|---|---|---|---|
| 1 | 2 | 3 | | | |
| | **5000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | |
| 1. | 1-ವಿರುಪಸಮುದ್ರ | 1. | ವಿರುಪಸಮುದ್ರ | 2. | ಮಾಚರಾಜನಹಳ್ಳಿ |
| | | 3. | ಕನಕಾಪುರ | 4. | ಗೌಡೇಟಿ |
| 2. | 11-ತಿರುಮಣಿ | 1. | ತಿರುಮಣಿ | 2. | ಅನ್ನದಾನಪುರ |
| | | 3. | ರಾಯಚರ್ಲು | | |
| 3. | 15-ಸಿದ್ದಾಪುರ | 1. | ಸಿದ್ದಾಪುರ | 2. | ಜಾಲೋಡು |
| | | 3. | ಗೌಡತಿಮ್ಮನಹಳ್ಳಿ | 4. | ಮಾರಮ್ಮನಹಳ್ಳಿ |
| 4. | 25-ಬೂದಿಬೆಟ್ಟ | 1. | ಬೂದಿಬೆಟ್ಟ | 2. | ರಾಚಮಾರನಹಳ್ಳಿ |
| | | 3. | ಎತ್ತಿನಹಳ್ಳಿ | 4. | ಯರ್ರಮ್ಮನಹಳ್ಳಿ |
| | | 5. | ಸಾರ್ವಾಟಪುರ | | |
| | **7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | |
| 5. | 4-ಪಾವಗಡ ಗ್ರಾಮಾಂತರ | 1. | ಪಾವಗಡ ಗ್ರಾಮಾಂತರ (ರೊಪ್ಪ) | 2. | ದಂಡೇನಹಳ್ಳಿ |
| | | 3. | ಅರಳೀಕುಂಟೆ | 4. | ಕೊಡಮಡಗು |
| | | 5. | ದೊಮ್ಮತನಹಳ್ಳಿ | 6. | ಕಡಮಲಕುಂಟೆ |
| | | 7. | ಸುಂಕಾರ್ಲಕುಂಟೆ | | |
| 6. | 21-ರಂಗಸಮುದ್ರ | 1. | ರಂಗಸಮುದ್ರ | 2. | ದೊಡ್ಡೇನಹಳ್ಳಿ |
| | | 3. | ಓಬಳಾಪುರ | 4. | ಬೆಳ್ಳಿಬಟ್ಲು |
| | | 5. | ಕಾಶಿಪುರ | | |
| 7. | 24-ಪೊನ್ನಸಮುದ್ರ | 1. | ಪೊನ್ನಸಮುದ್ರ | 2. | ಗಂಗಸಾಗರ |
| | | 3. | ತಾಳೆಮರದಹಳ್ಳಿ | 4. | ಕನಿಕಲಬಂಡೆ |
| | | 5. | ಬಿ. ಅಚ್ಚಮ್ಮನಹಳ್ಳಿ | 6. | ಸಿಂಗರೆಡ್ಡಿಹಳ್ಳಿ |
| | | 7. | ಕೊಮಾರ್ಲಹಳ್ಳಿ | | |
| 8. | 27-ನ್ಯಾಯದಗುಂಟೆ | 1. | ನ್ಯಾಯದಗುಂಟೆ | 2. | ಗೊಲ್ಲನಕುಂಟೆ |
| | | 3. | ಮುಮ್ಮಡಿಸಾಗರ | 4. | ರಂಗಪ್ಪನಹಳ್ಳಿ |
| | | 5. | ತಿಮ್ಮಲಾಪುರ | 6. | ಹೊಟ್ಟೆಬೊಮ್ಮನಹಳ್ಳಿ |
| | | 7. | ನಿಡಗಲ್ | 8. | ಕೊಡಿಗೇನಹಳ್ಳಿ |
| 9. | 29-ಗುಜ್ಜನಡು | 1. | ಗುಜ್ಜನಡು | 2. | ದವಡಬೆಟ್ಟ |
| | | 3. | ಕೋಣನಕುರಿಕೆ | 4. | ತಿಮ್ಮಳನಾಯಕನಬೆಟ್ಟ |
| 10. | 32-ಅರಸೀಕೆರೆ | 1. | ಅರಸೀಕೆರೆ | 2. | ತುಮ್ಮಕುಂಟೆ |
| | | 3. | ಮರೂರು | 4. | ಹೊಸಹಳ್ಳಿ |
| | | 5. | ಜಂಗಮರಹಳ್ಳಿ | 6. | ಬುಡಸನಹಳ್ಳಿ |
| 11. | 33-ವೈ-ಎನ್. ಹೊಸಕೋಟೆ | 1. | ವೈ.ಎನ್. ಹೊಸಕೋಟೆ | | |

**ಎಂ.ಬಿ. ದ್ಯಾಬೇರಿ**

ಪಿ.ಆರ್. 1604 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಕಾರ್ಯಾಲಯ

**ವಿಷಯ:** ಶ್ರೀ ಎಂ.ಎಲ್. ಶಿವಲಿಂಗಯ್ಯ ಮಾಜಿ ಕಾರ್ಯದರ್ಶಿ, ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್(ನಿ) ಮತ್ತಿಘಟ್ಟ, ಚಿಕ್ಕನಾಯಕನಹಳ್ಳಿ ತಾಲ್ಲೂಕು ಇವರ ಸ್ಥಿರಾಸ್ತಿಯನ್ನು ಪ್ರಾಥಮಿಕ ಕೃಷಿ ಸಹಕಾರ ಸಂಘ (ನಿ), ಮತ್ತಿಘಟ್ಟ, ಚಿಕ್ಕನಾಯಕನಹಳ್ಳಿ ತಾಲ್ಲೂಕು ಇವರ ಹೆಸರಿಗೆ ವರ್ಗಾವಣೆ ಮಾಡುವ ಕುರಿತು.

**ಉಲ್ಲೇಖ:** ಮಾರಾಟಾಧಿಕಾರಿಗಳು 441 ತುಮಕೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್(ನಿ) ತುಮಕೂರು ಇವರ ಪತ್ರದ ಸಂಖ್ಯೆ: ಮಾಅನಿ441:ತುಜಿಸಕೇಬ್ಯಾಂಕ್:ಮಾಟ:35:2003-2004 ದಿ:19.9.2003.

**ಪ್ರಸ್ತಾವನೆ:**

ಶ್ರೀ ಎಂ.ಎಲ್. ಶಿವಲಿಂಗಯ್ಯ ಮಾಜಿ ಕಾರ್ಯದರ್ಶಿ ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ (ನಿ), ಮತ್ತಿಘಟ್ಟ ಚಿಕ್ಕನಾಯಕನಹಳ್ಳಿ ತಾಲ್ಲೂಕು ಇವರು ಬ್ಯಾಂಕ್‌ನಲ್ಲಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ರೂ.184379-47 ಗಳನ್ನು ನಗದು ಮತ್ತು ದಾಸ್ತಾನು ರೂಪದಲ್ಲಿ ದುರುಪಯೋಗಪಡಿಸಿಕೊಂಡಿರುವುದು ಬ್ಯಾಂಕ್‌ನ 91-92ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಬೆಳಕಿಗೆ ಬಂದಿದ್ದರ ಮೇರೆಗೆ ಸದರಿಯವರ ವಿರುದ್ಧ ಸಹಕಾರ ಸಂಘಗಳ ಕಾಯಿದೆ ಕಲಂ 69ರ ಅಡಿಯಲ್ಲಿ ಅಧಿಭಾರ ಸಂಖ್ಯೆ:1:2000-2001 ರಂತೆ ದಾಖಲಾಗಿ ವಿಚಾರಣೆ ನಡೆದು ದಿನಾಂಕ: 23.3.2001 ರಂದು ತೀರ್ಮಾನಿಸಿ ರೂ.184379-47 ಗಳನ್ನು ವಸೂಲಿ ಮಾಡಿಕೊಳ್ಳಲು ಅರ್ಜಿದಾರರ ಬ್ಯಾಂಕ್‌ಗೆ ಆದೇಶಿಸಿ ವಸೂಲಾತಿ ಆದೇಶ ನೀಡಲಾಗಿತ್ತು. ಬ್ಯಾಂಕ್‌ನ ವ್ಯವಸ್ಥಾಪಕರು ಸದರಿ ಆದೇಶದನ್ವಯ ದುರುಪಯೋಗದ ಮೊತ್ತ ಮತ್ತು ಬಡ್ಡಿ ಇತರೆ ವೆಚ್ಚಗಳು ಸೇರಿ ರೂ.512729-47 ಗಳಿಗೆ ಅಮಲ್ಜಾರಿ ಸಂಖ್ಯೆ: 136:2001-2002 ದಿನಾಂಕ: 19.2.2002 ರ ರೀತ್ಯಾ ಅಮಲ್ಜಾರಿ ಪಡೆದು ಮುಂದಿನ ಕ್ರಮಕ್ಕಾಗಿ ಮಾರಾಟಾಧಿಕಾರಿಗಳು 441 ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್(ನಿ) ತುಮಕೂರು ಇವರಿಗೆ ಕಳುಹಿಸಲಾಗಿತ್ತು. ಅದರಂತೆ ಮಾರಾಟಾಧಿಕಾರಿಗಳು ಅಮಲ್ಜಾರಿ ಕ್ರಮ ಕೈಗೊಂಡು ಶ್ರೀ ಎಂ.ಎಲ್. ಶಿವಲಿಂಗಯ್ಯ ನವರ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:25.7.2003 ರಂದು ಬಹಿರಂಗ ಹರಾಜು ನಡೆಸಲಾಗಿದ್ದು ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಯಾರು ಭಾಗವಹಿಸದೆ ಇದ್ದರಿಂದ ಬ್ಯಾಂಕ್‌ನ ವ್ಯವಸ್ಥಾಪಕರು ಸ್ಥಿರಾಸ್ತಿಯನ್ನು ಬ್ಯಾಂಕ್‌ನ ಹೆಸರಿಗೆ ನಿಲ್ಲಿಸಲು ಕೋರಿರುವ ಮೇರೆಗೆ ಮಾರಾಟಾಧಿಕಾರಿಗಳು ಸ್ಥಿರಾಸ್ತಿಯನ್ನು ಬ್ಯಾಂಕ್‌ನ ಹೆಸರಿಗೆ ನಿಲ್ಲಿಸಿ ಸ್ಥಿರಾಸ್ತಿಯನ್ನು ಬ್ಯಾಂಕ್‌ನ ಹೆಸರಿಗೆ ವರ್ಗಾಯಿಸಿ ಆದೇಶ ಹೊರಡಿಸಲು ಉಲ್ಲೇಖಿತ ಪತ್ರದ ಕೋರಿ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಆದ್ದರಿಂದ ಶ್ರೀ ಎಂ.ಎಲ್. ಶಿವಲಿಂಗಯ್ಯ ಇವರ ಸ್ಥಿರಾಸ್ತಿಯನ್ನು ಬ್ಯಾಂಕ್‌ನ ಹೆಸರಿಗೆ ವರ್ಗಾಯಿಸುವ ಬಗ್ಗೆ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ 30 ದಿವಸದೊಳಗೆ ಸಲ್ಲಿಸುವಂತೆ ಸದರಿಯವರಿಗೆ ಸೂಚಿಸಿ ನೋಟೀಸು ನೀಡಲಾಗಿತ್ತು. ಆದರೆ ಸದರಿಯವರು ನಿಗದಿತ ಸಮಯದೊಳಗೆ ವಿವರಣೆ ನೀಡಿರುವುದಿಲ್ಲ.

ಆದ್ದರಿಂದ ಶ್ರೀ ಎಂ.ಎಲ್. ಶಿವಲಿಂಗಯ್ಯ, ಇವರ ಹೆಸರಿನಲ್ಲಿರುವ ಚಿಕ್ಕನಾಯಕನಹಳ್ಳಿ ತಾಲ್ಲೂಕು ಮತ್ತಿಘಟ್ಟ ಗ್ರಾಮದ ಸರ್ವೆ ನಂ. 77 ರಲ್ಲಿನ ಖುಷ್ಕಿ 2.20 ಗುಂಟೆ ಸ್ಥಿರಾಸ್ತಿಯನ್ನು ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್(ನಿ) ಮತ್ತಿಘಟ್ಟ ಚಿಕ್ಕನಾಯಕನಹಳ್ಳಿ ತಾಲ್ಲೂಕು ಇದರ ಹೆಸರಿಗೆ ವರ್ಗಾಯಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ನಂ:ಸನಿ-34:ಡಿಡಿಎಸ್:ಸ್ಥಿಯಾನಿ:170:2003-2004, ದಿನಾಂಕ: 13ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಎಂ.ಎಲ್. ಶಿವಲಿಂಗಯ್ಯ ಮಾಜಿ ಕಾರ್ಯದರ್ಶಿ, ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್(ನಿ) ಮತ್ತಿಘಟ್ಟ ಇವರ ವಿರುದ್ಧ ಕೈಗೊಂಡ ಅಮಲ್ಜಾರಿ ಸಂಖ್ಯೆ:136:2001-2002ರ ಪ್ರಕರಣದಲ್ಲಿ ಒಳಗೊಂಡ ಹಣದ ವಸೂಲಾತಿಗಾಗಿ ಸದರಿಯವರ ಈ ಕೆಳಕಂಡ ಸ್ಥಿರಾಸ್ತಿಯನ್ನು ಮಾರಾಟಾಧಿಕಾರಿಗಳು ದಿನಾಂಕ:25.7.2003 ರಂದು ನಡೆಸಿದ ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಯಾರು ಭಾಗವಹಿಸದೆ ಇದ್ದರಿಂದ ಬ್ಯಾಂಕ್‌ನ ವ್ಯವಸ್ಥಾಪಕರ ಕೋರಿಕೆಯಂತೆ ಮಾರಾಟಾಧಿಕಾರಿಗಳು ಬ್ಯಾಂಕ್‌ನ ಹೆಸರಿಗೆ ನಿಲ್ಲಿಸಿ ಸ್ಥಿರಾಸ್ತಿಯನ್ನು ಬ್ಯಾಂಕ್‌ನ ಹೆಸರಿಗೆ ವರ್ಗಾಯಿಸಲು ಕೋರಿಕೆ ಮೇರೆಗೆ ಬ್ಯಾಂಕ್‌ನ ಹಿತದೃಷ್ಟಿಯಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಆದ ನಾನು ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101 (ಬಿ) ಮತ್ತು 1960ರ ನಿಯಮ 38 ರಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸುತ್ತಾ ಶ್ರೀ ಎಂ.ಎಲ್. ಶಿವಲಿಂಗಯ್ಯ, ಮಾಜಿ ಕಾರ್ಯದರ್ಶಿ, ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್(ನಿ) ಮತ್ತಿಘಟ್ಟ ಇವರ ಹೆಸರಿನಲ್ಲಿರುವ ಈ ಕೆಳಕಂಡ ಸ್ಥಿರಾಸ್ತಿಯನ್ನು ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್(ನಿ), ಮತ್ತಿಘಟ್ಟ ಚಿಕ್ಕನಾಯಕನಹಳ್ಳಿ ತಾಲ್ಲೂಕು ಇದರ ಹೆಸರಿಗೆ ವರ್ಗಾಯಿಸಿ ಆದೇಶ ಹೊರಡಿಸಿದೆ. ಇನ್ನು ಮುಂದೆ ಸ್ಥಿರಾಸ್ತಿಯ ಎಲ್ಲಾ ಹಕ್ಕು ಬಾಧ್ಯತೆಗಳಿಗೆ ಬ್ಯಾಂಕ್ ಹಕ್ಕುದಾರರಾಗಿರುತ್ತಾರೆ ಎಂದು ಆದೇಶಿಸಿದೆ.

**ಬ್ಯಾಂಕ್‌ನ ಹೆಸರಿಗೆ ವರ್ಗಾವಣೆಗೊಂಡ ಸ್ಥಿರಾಸ್ತಿ ವಿವರ**

| ಕ್ರ. ಸಂ. | ಹಕ್ಕುದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ವಿಸ್ತೀರ್ಣ | ತರಹೆ |
|---|---|---|---|---|
| 1. | ಎಂ.ಎಲ್. ಶಿವಲಿಂಗಯ್ಯ | ಮತ್ತಿಘಟ್ಟ, ಚಿಕ್ಕನಾಯಕನಹಳ್ಳಿ ತಾಲ್ಲೂಕು | 2.20 | ಖುಷ್ಕಿ |

**ಚಕ್ಕುಬಂದಿ:**
1. ಪೂರ್ವಕ್ಕೆ - ನಾಗರಾಜು ಬಿನ್ ರಾಮಯ್ಯ
2. ಪಶ್ಚಿಮಕ್ಕೆ - ನಿಂಗಪ್ಪ ಬಿನ್ ಈರನಾಯಕ ಮತ್ತು ಸೋಮಶೇಖರ್
3. ಉತ್ತರಕ್ಕೆ - ಹನುಮಂತಯ್ಯ ಬಿನ್ ಸಣ್ಣ ಕರಿಯಮ್ಮ
4. ದಕ್ಷಿಣಕ್ಕೆ - ರಾಮಯ್ಯ

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿ:13.8.2004 ರಂದು ನೀಡಿದೆ.

ಪಿ.ಆರ್. 1605 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು.

### ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ನಡವಳಿಗಳು

**ವಿಷಯ:** ಕುಂದರಸನಹಳ್ಳಿ ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ. ಬಂಗಾರಪೇಟೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ಸಂಖ್ಯೆ:ಡಿಆರ್‌ಕೆ:ಎಲ್‌ಕ್ಯೂಡಿ:1230/30 1998-99 ದಿನಾಂಕ: 29.9.1998 ಮತ್ತು 21.6.2003.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರದ ಸಂಖ್ಯೆ: ಎಆರ್‌ಕೆ:ಎಲ್‌ಕ್ಯೂಡಿ:ಸಿಆರ್.22:98-99 ದಿನಾಂಕ: 20.10.2004.

**ಪೀಠಿಕೆ:**

ಬಂಗಾರಪೇಟೆ ತಾಲ್ಲೂಕು ಕುಂದರಸನಹಳ್ಳಿ ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ಈ ಸಂಘವು ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು, ಬಂಗಾರಪೇಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ, ನಂತರ ಅವರ ಬದಲಿಗೆ ಶ್ರೀ ಡಿ. ನಾಗರಾಜು, ಹಿರಿಯ ನಿರೀಕ್ಷಕರು, ನಿಯಮ 441, ಕೋಲಾರ ಜಿಲ್ಲಾ ಸಹಕಾರಿ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ ನಿ., ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ವರದಿ ಸಲ್ಲಿಸಿ, ಸಂಘವು ನೋಂದಣಿಯಾದಾಗಿನಿಂದ ಕಾರ್ಯನಿರ್ವಹಿಸದೆ ಇದ್ದು, ಹಾಗೂ ಕಾರ್ಯವ್ಯಾಪ್ತಿಯ ಗ್ರಾಮಸ್ಥರಿಗಾಗಲೀ ಅಥವಾ ಸದಸ್ಯರಿಗಾಗಲೀ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಆಸಕ್ತಿ ಇರುವುದಿಲ್ಲವೆಂದು ಮತ್ತು ಲೆಕ್ಕಪುಸ್ತಕಗಳು ಲಭ್ಯವಿಲ್ಲದೆ ಇದ್ದು, ಈ ಸಂಘದ ಪುನಃಶ್ಚೇತನಕ್ಕೆ ಯಾವುದೇ ರಹಾ ಇಲ್ಲದೇ ಇದ್ದು, ಇದನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಅಥವಾ ಸರ್ಕಾರಕ್ಕಾಗಲೀ ಯಾವುದೇ ಪ್ರಯೋಜನವಿಲ್ಲದ ಕಾರಣ ಈ ಸಂಘದ ನೋಂದಣಿಯನ್ನು ರದ್ದುಪಡಿಸಬೇಕೆಂದು ಕೋರಿರುತ್ತಾರೆ. ಹಾಗೂ ದಿನಾಂಕ:13.10.2004 ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಸಮಾಪನಾಧಿಕಾರಿಗಳು ಕೈಗೊಂಡ ತೀರ್ಮಾನದ ನಡವಳಿಕೆಗಳನ್ನು ಮತ್ತು ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೆ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ:ಡಿಆರ್‌ಕೆ:ಎಲ್‌ಕ್ಯೂಡಿ:1230:98-99, ದಿನಾಂಕ: 25ನೇ ಅಕ್ಟೋಬರ್ 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಬಂಗಾರಪೇಟೆ ತಾಲ್ಲೂಕು ಕುಂದರಸನಹಳ್ಳಿ ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ಈ ಸಂಘದ ನೋಂದಣಿ ಸಂಖ್ಯೆ:ಎಆರ್‌ಕೆ:ಇಎಸ್‌ಟಿ:ಸಿಆರ್:125: ನೋಂದಣಿ:23875 ದಿನಾಂಕ: 14.9.1996ನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯು:69:ಸಿಎಲ್‌ಎಂ:2001 ದಿನಾಂಕ:21.11.2001 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ, ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ ಹಾಗೂ ಸಮಾಪನಾಧಿಕಾರಿಗಳು ಸಂಘದ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು 30 ದಿನದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:25.10.2004 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ನೀಡಲಾಗಿದೆ.

**ಬಿ.ಸಿ. ಸತೀಶ್**

ಪಿ.ಆರ್. 1606 ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

**ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ನಡವಳಿಗಳು**

**ವಿಷಯ:** ಬಂಗಾರಪೇಟೆ ತಾಲ್ಲೂಕು ಟಿ. ಗೊಲ್ಲಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ), ಇದರ ನೊಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶದ ಸಂಖ್ಯೆ:ಡಿಆರ್‌ಕೆ:ಎಲ್‌ಕ್ಯೂಡಿ:35:98-99 ದಿನಾಂಕ:11.9.98 ಮತ್ತು 21.6.2003.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರದ ಸಂಖ್ಯೆ: ಎಆರ್‌ಕೆ:ಎಲ್‌ಕ್ಯೂಡಿ:ಸಿಆರ್.31:98-99 ದಿನಾಂಕ: 20.10.2004.

**ಪೀಠಿಕೆ:**

ಬಂಗಾರಪೇಟೆ ತಾಲ್ಲೂಕು ಟಿ. ಗೊಲ್ಲಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಈ ಸಂಘವು ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ವ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ಬಂಗಾರಪೇಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ, ನಂತರ ಅವರ ಬದಲಿಗೆ ಶ್ರೀ ವಿ. ನಾಗರಾಜು ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ನಿಯಮ 441, ಕೋಲಾರ ಜಿಲ್ಲಾ ಸಹಕಾರಿ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ ನಿ., ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರಿಗೆ ವರದಿ ಸಲ್ಲಿಸಿ, ಸಂಘವು ಕಾರ್ಯನಿರ್ವಹಿಸದೆ 5 ವರ್ಷದಿಂದ ಸ್ಥಗಿತಗೊಂಡಿದ್ದು ಸಂಘದ ಕಾರ್ಯವ್ಯಾಪ್ತಿಯು ಜನರಿಗೆ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಆಸ್ಪತ್ರೆ ಇಲ್ಲದೆ ಇರುವುದರಿಂದ ಹಾಗೂ ಲೆಕ್ಕ ಪುಸ್ತಕಗಳು ಲಭ್ಯವಿಲ್ಲದೆ ಇರುವುದರಿಂದ ಸಂಘದ ಪುನಃಶ್ಚೇತನಕ್ಕೆ ಯಾವುದೇ ರಜಾ ಇಲ್ಲದೇ ಇದ್ದು, ಇದನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಅಥವಾ ಸರ್ಕಾರಕ್ಕಾಗಲೀ ಯಾವುದೇ ಪ್ರಯೋಜನವಿಲ್ಲದ ಕಾರಣ ಈ ಸಂಘದ ನೋಂದಣಿಯನ್ನು ರದ್ದುಪಡಿಸಬೇಕೆಂದು ಕೋರಿರುತ್ತಾರೆ. ಹಾಗೂ ದಿನಾಂಕ:14.10.2004 ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಸಮಾಪನಾಧಿಕಾರಿಗಳು ಕೈಗೊಂಡ ತೀರ್ಮಾನದ ನಡವಳಿಕೆಗಳನ್ನು ಮತ್ತು ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೆ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ:ಡಿಆರ್‌ಕೆ:ಎಲ್‌ಕ್ಯೂಡಿ:35:98-99, ದಿನಾಂಕ: 25ನೇ ಅಕ್ಟೋಬರ್ 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಬಂಗಾರಪೇಟೆ ತಾಲ್ಲೂಕು ಟಿ. ಗೊಲ್ಲಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಈ ಸಂಘದ ನೋಂದಣಿ ಸಂಖ್ಯೆ:ಎಆರ್‌ಕೆ:ಯೋ:86:17907:91-92 ದಿನಾಂಕ: 3.9.1991ನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರಂತೆ

ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ, ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ ಹಾಗೂ ಸಮಾಪನಾಧಿಕಾರಿಗಳು ಸಂಘದ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು 30 ದಿನದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:25.10.2004 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ನೀಡಲಾಗಿದೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1607

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ:ಎಂಡಿ:6280:2004-05, ದಿನಾಂಕ: 30ನೇ ಅಕ್ಟೋಬರ್ 2004**

**ವಾದಿ**
ಪ್ರಧಾನ ವ್ಯವಸ್ಥಾಪಕರು
ದಾವಣಗೆರೆ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ,
ದಾವಣಗೆರೆ

**ಪ್ರತಿವಾದಿಗಳು**
1. ವ್ಯವಸ್ಥಾಪಕ ನಿರ್ದೇಶಕರು,
ವಾಣಿವಿಲಾಸ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ, ಹಿರಿಯೂರು.
2. ವ್ಯವಸ್ಥಾಪಕ ನಿರ್ದೇಶಕರು,
ಚಿತ್ರದುರ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, ಚಿತ್ರದುರ್ಗ.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.3,65,44,777-00 ಗಳನ್ನು ದಿನಾಂಕ 15.9.2004 ರಿಂದ ಶೇಕಡಾ 16 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ನಂ.ಜೆಆರ್‌ಬಿ:ಎಂಡಿ:6280:2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ 1ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ; ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್:ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.3,65,44,777-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾಮಾಡಿ ದಿನಾಂಕ:27-11-2004 ರ ಒಳಗಾಗಿ ಅಧಿಕೃತ ಚಲನ್ / ರಶೀತಿಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ ಷೆಡ್ಯೂಲ್ - 1**

ವಾಣಿವಿಲಾಸ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ, ಹಿರಿಯೂರು ಈ ಕಾರ್ಖಾನೆಗೆ ಸೇರಿದ ಈ ಕೆಳಗೆ ತಿಳಿಸಿರುವಂತೆ ವಿವಿಧ ಸರ್ವೆ ನಂಬರ್‌ಗಳಲ್ಲಿ ಹೊಂದಿರುವ ಜಮೀನು ಮತ್ತು ಸದರಿ ಜಮೀನಿನಲ್ಲಿ ಕಟ್ಟಲಾಗಿರುವ ಕಾರ್ಖಾನೆ ಕಟ್ಟಡ, ಬಾವಿ, ಮರಮುಟ್ಟುಗಳು ಇತ್ಯಾದಿ ಸೇರಿದಂತೆ,

ಹಿರಿಯೂರು ತಾಲ್ಲೂಕು ಮ್ಯಾಕಲೂರು ಹಳ್ಳಿ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿರುವ ಜಮೀನುಗಳು:

| ಕ್ರ. ಸಂ. | ಸರ್ವೆ ನಂಬರ್ | ಜಮೀನಿನ ವಿವರ |
|---|---|---|
| 1. | 64/1 | 10 ಎಕರೆ 16 ಗುಂಟೆ |
| 2. | 74/2 | 2 ಎಕರೆ 33 ಗುಂಟೆ |
| 3. | 74/3 | 2 ಎಕರೆ 33 ಗುಂಟೆ |
| 4. | 74/4 | 2 ಎಕರೆ 7 ಗುಂಟೆ |
| 5. | 74/6 | 2 ಎಕರೆ 27 ಗುಂಟೆ |
| 6. | 74/7 | 2 ಎಕರೆ 27 ಗುಂಟೆ |
| 7. | 74/8 | 1 ಎಕರೆ 2 ಗುಂಟೆ |
| 8. | 74/9 | 1 ಎಕರೆ 20 ಗುಂಟೆ |
| 9. | 74/11 | 1 ಎಕರೆ 2 ಗುಂಟೆ |
| 10. | 74/13 | 1 ಎಕರೆ 2 ಗುಂಟೆ |
| 11. | 74/16 | 1 ಎಕರೆ 3 ಗುಂಟೆ |
| 12. | 74/19 | 1 ಎಕರೆ 4 ಗುಂಟೆ |
| 13. | 74/20 | 1 ಎಕರೆ 4 ಗುಂಟೆ |
| 14. | 74/21 | 1 ಎಕರೆ 4 ಗುಂಟೆ |
| 15. | 74/25 | 1 ಎಕರೆ 4 ಗುಂಟೆ |
| 16. | 74/22 | 1 ಎಕರೆ 4 ಗುಂಟೆ |
| 17. | 74/28 | 1 ಎಕರೆ 24 ಗುಂಟೆ |
| 18. | 74/29 | 1 ಎಕರೆ 24 ಗುಂಟೆ |

ಮೇಲ್ಕಂಡ ಜಮೀನುಗಳು ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು ಮ್ಯಾಕಲೂರಹಳ್ಳಿ, ಕಸಬಾ ಹೋಬಳಿ, ಚಕ್ಕುಬಂದಿಯಲ್ಲಿ ಸೇರಿದ್ದು, ಚಕ್ಕುಬಂದಿ:

ಪೂರ್ವಕ್ಕೆ : ಸರ್ವೆ ನಂ.75
ಪಶ್ಚಿಮಕ್ಕೆ : ಸರ್ವೆ ನಂ.73 ಮತ್ತು ಎಸ್.ಐ.ಎಂ.ಎಸ್. ವಾಸದ ಮನೆಗಳು
ಉತ್ತರಕ್ಕೆ : ಮ್ಯಾಕಲೂರಹಳ್ಳಿ ರಸ್ತೆ ಮತ್ತು
ದಕ್ಷಿಣಕ್ಕೆ : 1ನೇ ಪ್ರತಿವಾದಿ ಸಕ್ಕರೆ ಕಾರ್ಖಾನೆಗೆ ಸೇರಿದ ಜಮೀನುಗಳು

ಸರ್ವೆ ನಂ.65/1 : 9 ಎಕರೆ 8 ಗುಂಟೆ (20 ವಾಸದ ಮನೆಗಳು ಸೇರಿದೆ) ಇವುಗಳು ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು ಮ್ಯಾಕಲೂರಹಳ್ಳಿ, ಕಸಬಾ ಹೋಬಳಿ ಚಕ್ಕುಬಂದಿಯಲ್ಲಿ ಸೇರಿದ್ದು, ಚಕ್ಕುಬಂದಿ:

ಪೂರ್ವಕ್ಕೆ : ಬಳ್ಳಾರಿ ರಸ್ತೆ
ಪಶ್ಚಿಮಕ್ಕೆ : ಕಾರ್ಖಾನೆಯ ಜಮೀನು
ಉತ್ತರಕ್ಕೆ : ಕಾರ್ಖಾನೆಯ ಜಮೀನು ಮತ್ತು
ದಕ್ಷಿಣಕ್ಕೆ : ಕಾರ್ಖಾನೆಯ ಜಮೀನು

| ಕ್ರ. ಸಂ. | ಸರ್ವೆ ನಂಬರ್ | ಜಮೀನಿನ ವಿವರ |
|---|---|---|
| 1. | 67 | 44 ಎಕರೆ 36 ಗುಂಟೆ |
| 2. | 66 | 63 ಎಕರೆ 31 ಗುಂಟೆ |
| 3. | 75 | 45 ಎಕರೆ 34 ಗುಂಟೆ |
| | ಒಟ್ಟು | 154 ಎಕರೆ 21 ಗುಂಟೆ |

ಮೇಲ್ಕಂಡ ಜಮೀನುಗಳು ಹಿರಿಯೂರು ತಾಲ್ಲೂಕು ಮ್ಯಾಕಲೂರಹಳ್ಳಿ ಗ್ರಾಮದಲ್ಲಿರುವ ಕಾರ್ಖಾನೆಯ ಚಕ್ಕುಬಂದಿಯಲ್ಲಿ ಸೇರಿದ್ದು, ಹಾಲಿ ಇದು ಹಿರಿಯೂರು ಮುನಿಸಿಪಲ್ ವ್ಯಾಪ್ತಿಗೆ ಸೇರಿರುತ್ತದೆ. ಇದಕ್ಕೆ ಚಕ್ಕುಬಂದಿ:

1. ಸರ್ವೆ ನಂ.67ಕ್ಕೆ ಸಂಬಂಧಿಸಿದಂತೆ:
   ಪೂರ್ವಕ್ಕೆ : ಆರ್.ಎಸ್.ನಂ.66
   ಪಶ್ಚಿಮಕ್ಕೆ : ಆರ್.ಎಸ್.ನಂ.68/69
   ಉತ್ತರಕ್ಕೆ : ಆರ್.ಎಸ್.ನಂ.70
   ದಕ್ಷಿಣಕ್ಕೆ : ಕೃಷ್ಣಾಂಬುದಿ ಬಾರ್ಡರ್
2. ಸರ್ವೆ ನಂ.66ಕ್ಕೆ ಸಂಬಂಧಿಸಿದಂತೆ ಚಕ್ಕುಬಂದಿ:
   ಪೂರ್ವಕ್ಕೆ : ಆರ್.ಎಸ್.ನಂ.65
   ಪಶ್ಚಿಮಕ್ಕೆ : ಆರ್.ಎಸ್.ನಂ.67
   ಉತ್ತರಕ್ಕೆ : ಆರ್.ಎಸ್.ನಂ.72/73
   ದಕ್ಷಿಣಕ್ಕೆ : ಹಿರಿಯೂರು ಟೌನ್ ಬಾರ್ಡರ್

